ಪ್ರಚಾರ ಪುಸ್ತಕ ಮಾಲೆ

166

# ಚನ್ನಬಸವಣ್ಣ

ಓ. ಎನ್. ಲಿಂಗಣ್ಣಯ್ಯ



ಪ್ರಚಾರ ಪುಸ್ತಕಮಾಲೆ—೧೬೬

# ಚನ್ನಬಸವಣ್ಣ

ಓ. ಎನ್. ಲಿಂಗಣ್ಣಯ್ಯ, ಬಿ.ಎ. (ಆನರ್ಸ್)




೧೯೮೭

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣ ವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು

ನೂರಅರವತ್ತೈದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಓ. ಎನ್. ಲಿಂಗಣ್ಣಯ್ಯ ಅವರ 'ಚನ್ನಬಸವಣ್ಣ' ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ.

**ದೇ. ಜವರೇಗೌಡ**
ಕುಲಪತಿಗಳು

# ಕೃತಜ್ಞತೆ

ವಚನವಾಙ್ಮಯ ಅಪಾರ; ಅನಂತ. ಈ ವಾಙ್ಮಯ ಹನ್ನೆರಡನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಬಸವಣ್ಣನ ನೇತೃತ್ವದಲ್ಲಿ ಅಪೂರ್ವಕಾಂತಿಯಿಂದ ಬೆಳಗಿತು. ಶಿವಶರಣರು ಜನಜೀವನದಲ್ಲಿ ಜಾತಿ–ಮತ, ಕುಲ–ಗೋತ್ರ, ಹೆಣ್ಣು–ಗಂಡು, ಕೀಳು–ಮೇಲು ಎಂಬ ಭೇದ ಭಾವನೆಯನ್ನು ಹೋಗಲಾಡಿಸಿ, ಮಾನವರೆಲ್ಲ ಸರ್ವಸಮಾನರು ಎಂಬ ಉದಾತ್ತ ತತ್ವವನ್ನು ಬೋಧಿಸಿ, ಆಚರಿಸಿ ಮಾನವ ಕಲ್ಯಾಣವನ್ನು ಸಾಧಿಸಿದರು; ಕೃತಾರ್ಥರಾದರು. ಧಾರ್ಮಿಕ, ಸಾಮಾಜಿಕ, ತಾತ್ವಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ನವ ಚೈತನ್ಯ ಉದಯವಾಯಿತು. ಆ ಶರಣ ವೃಂದದಲ್ಲಿ ಬಸವಣ್ಣ, ಚನ್ನಬಸವಣ್ಣ, ಅಲ್ಲಮ ಈ ಮೂವರೂ ಪ್ರಮುಖರಾಗಿದ್ದರು. ಇವರು ಶರಣ ಧರ್ಮದಲ್ಲಿ ಗುರುಲಿಂಗಜಂಗಮ ಸ್ವರೂಪರಾಗಿದ್ದರು. ಅಂದು ಬಸವಣ್ಣ ಕಲ್ಯಾಣದಲ್ಲಿ ಸಂಸ್ಥಾಪಿಸಿದ ಅನುಭವಮಂಟಪ ವಿಶ್ವಧರ್ಮ ಕ್ಷೇತ್ರವಾಯಿತು. ಶರಣಧರ್ಮ ಉದಾರಭಾವದಿಂದ ದೀನ ದಲಿತರನ್ನೂ ಸ್ತ್ರೀ ಶೂದ್ರರನ್ನೂ ಅಂತ್ಯಜರನ್ನೂ ಶಿವಪಥದಲ್ಲಿ ನಡೆಯಿಸಿತು. ಇದರಿಂದ ಸಮಾಜದಲ್ಲಿ ಅಸದೃಶ ಶಾಂತಿಯುತ ಕ್ರಾಂತಿಯಾಯಿತು. ಈ ಕ್ರಾಂತಿಯ ಎಲ್ಲ ಕಾರ್ಯಕ್ಷೇತ್ರ ಗಳಲ್ಲಿಯೂ ಚನ್ನಬಸವಣ್ಣ ಆಚಾರ್ಯ ಸ್ಥಾನದಲ್ಲಿದ್ದನು. ಅವನ ಶಾಸ್ತ್ರಪರಿಜ್ಞಾನ, ಧರ್ಮ, ಸೂಕ್ಷ್ಮವಿಚಾರಶಕ್ತಿ, ಪ್ರಾಚೀನ ಶೈವ ಸಿದ್ಧಾಂತ ವೈದುಷ್ಯ–ಇವು ಉನ್ನತ ಮಟ್ಟದಲ್ಲಿದ್ದುವು. ಚನ್ನಬಸವಣ್ಣ ಸರಳ ಸುಂದರ 'ವಚನ'ಗಳಲ್ಲಿ ಕನ್ನಡ ನುಡಿಯಲ್ಲಿ ಜನಸಾಮಾನ್ಯರಿಗೂ ಅರ್ಥವಾಗುವಂತೆ ಬೋಧಿಸಿದನು;

ಕನ್ನಡ ಸಾಹಿತ್ಯದ ಹಿರಿಮೆ ಗರಿಮೆಗಳನ್ನು ಬೆಳಗಿದನು. ಇಂಥ ಮಹಾ ಶರಣನ ಜೀವನಚಿತ್ರವನ್ನು ನಾನು ಈ ಪುಟ್ಟ ಪುಸ್ತಕದಲ್ಲಿ ರೂಪಿಸಲು ಪ್ರಯತ್ನಿಸಿರುತ್ತೇನೆ. ಈ ಪುಸ್ತಕವನ್ನು ಪ್ರಕಟಿಸಲು ಆಶ್ರಯವಿತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರವರ್ಗದವರಿಗೂ, ಪ್ರಸಾರಾಂಗದ ಕಾರ್ಯಕರ್ತರಿಗೂ ನಾನು ನನ್ನ ಸವಿನಯ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಓ. ಎನ್. ಲಿಂಗಣ್ಣಯ್ಯ

ಪೂರ್ವ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನು ಮರಣ ಹೊಂದಿದ ಮೇಲೆ, ಅವನ ತಮ್ಮ ಮೂರನೆಯ ತ್ರೈಲಪನು ಸಾರ್ವಭೌಮನಾದನು. ಅವನು ವಯಸ್ಸಿನಲ್ಲಿ ಕಿರಿಯ; ಅನನುಭವಿ. ಸಾಮಂತರಾಜರು ಸ್ವತಂತ್ರರಾಗುತ್ತ ಬಂದರು. ಹೊಯ್ಸಳ ನಾಡಿನ ನರಸಿಂಹನೂ, ಓರಂಗಲ್ಲಿನ ಪ್ರತಾಪ ರುದ್ರನೂ ದಂಗೆಯೆದ್ದರು. ಅಂದಿನ ರಾಜಕೀಯದಲ್ಲಿ ಪ್ರಕ್ಷುಬ್ಧ ವಾತಾವರಣ ಮೂಡಿತು. ತರ್ದವಾಡಿಯ ಸಾಮಂತ ಕಲಚೂರ್ಯ ವಂಶದ ಬಿಜ್ಜಳನು ಸಮಯ ಸಾಧಿಸಿ, ತ್ರೈಲಪನನ್ನು ಮೂಲೆಗೆ ಕೂಡಿಸಿ, ಕ್ರಿ.ಶ. ೧೧೬೧ರಲ್ಲಿ ತಾನೇ ಚಾಲುಕ್ಯ ಸಾಮ್ರಾಜ್ಯದ ಚಕ್ರವರ್ತಿ ಎಂದು ಘೋಷಿಸಿದನು.

ಬಲದೇವ ಮತ್ತು ಸಿದ್ಧರಸ ಎಂಬುವರು ಬಿಜ್ಜಳನ ಮಹಾ ಮಂತ್ರಿ ಮತ್ತು ಮಹಾದಂಡನಾಯಕರಾಗಿದ್ದರು. ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆಯನ್ನೂ, ಸಿದ್ಧರಸನ ಮಗಳು ನೀಲಾಂಬಿಕೆಯನ್ನೂ ಬಸವಣ್ಣನವರು ಮದುವೆಯಾದರು. ಕೆಲವು ಕಾಲಾನಂತರ, ಬಸವಣ್ಣನವರೇ ಬಿಜ್ಜಳನ ಮಹಾ ಮಂತ್ರಿ ಮತ್ತು ಮಹಾದಂಡನಾಯಕರಾದರು. ಬಸವಣ್ಣನವರ ಸಹೋದರಿ ಅಕ್ಕ ನಾಗಲಾಂಬಿಕೆ; ಆಕೆಯ ಪತಿ ಶಿವದೇವ. ಈ ದಂಪತಿಗಳ ಪುತ್ರನೇ ಚನ್ನಬಸವಣ್ಣ.

ಬಸವಣ್ಣನವರು ಬಿಜ್ಜಳನ ರಾಜ್ಯದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದರು. ಅವರು ಜನಜೀವನದ ಕಲ್ಯಾಣವನ್ನು ಸಾಧಿಸಲು ಸದಾ ಪ್ರಯತ್ನಿಸುತ್ತಿದ್ದರು. ಅವರು ಪರಮ ಶಿವಭಕ್ತರು; ಆತ್ಮಜ್ಞಾನಸಂಪನ್ನರು. ಅವರ ಬಳಿ ಚನ್ನಬಸವಣ್ಣನವರು

ಶಿವಧರ್ಮಸಂಪನ್ನರೂ, ಷಟ್ಸ್ಥಲ ಜ್ಞಾನ ಪರಿಪೂರ್ಣರೂ, ಅಧ್ಯಾತ್ಮ ಸಿದ್ಧಪುರುಷರೂ ಆಗಿದ್ದರು. ಸೋದರತ್ತೆಯರ ಪ್ರೇಮದ ಮಡಿಲಿನಲ್ಲಿ, ತಾಯಿಯ ವಾತ್ಸಲ್ಯ ಪೂರ್ಣ ಲಾಲನೆ ಪಾಲನೆಯಲ್ಲಿ, ಸೋದರಮಾವ ಬಸವಣ್ಣನವರ ಅಮೃತ ಹಸ್ತದಲ್ಲಿ; ತಂದೆ ಶಿವಸ್ವಾಮಿಯ ನಿಷ್ಕಲ್ಮಷ ಮಮತೆಯಲ್ಲಿ ಚನ್ನಬಸವಣ್ಣನವರ ಪುಣ್ಯಜೀವನ ರೂಪುಗೊಳ್ಳುತ್ತಿತ್ತು; ಇಂಥ ಸತ್ಯ ಸುಂದರ ಶಿವಪ್ರಭಾವಲಯದ ಹಿನ್ನೆಲೆಯಲ್ಲಿ ಚನ್ನಬಸವಣ್ಣನವರ ಮಹೋನ್ನತ ಜೀವನ ಚಿತ್ರವನ್ನು ಕಂಡರಿಯಬೇಕು.

೨

ಚನ್ನಬಸವಣ್ಣನವರ ಜನನ, ಬಾಲ್ಯ ಮತ್ತು ವಿದ್ಯಾಭ್ಯಾಸ ವಿಚಾರಗಳನ್ನು ಕುರಿತು ಸಾಕಾದಷ್ಟು ವಿವರಗಳು ತಿಳಿದು ಬರುವುದಿಲ್ಲ. ಅವರ ಜನನವನ್ನು ಪವಾಡ ರೂಪದಲ್ಲಿ ಚಿತ್ರಿಸಿರುವ ಸಂದರ್ಭಗಳೂ ಉಂಟು. ಅಕ್ಕ ನಾಗಲಾಂಬಿಕೆಯ ಪತಿ ಶಿವಸ್ವಾಮಿ ಎಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಆತನನ್ನು ಶಿವದೇವನೆಂದೂ ಕರೆಯುತ್ತಾರೆ. ಸಿಂಗಿರಾಜ ಪುರಾಣದ ತರುವಾಯ ಹುಟ್ಟಿರಬಹುದಾದ ವೀರಶೈವ ಸಾಹಿತ್ಯದಲ್ಲಿ ಈ ವಿಚಾರವಾಗಿ ಏಕಾಭಿಪ್ರಾಯವಿಲ್ಲ. ಅವರು ಪ್ರಸಾದ ಬಲದಿಂದ ಜನಿಸಿದರು ಎಂಬುದನ್ನು ನಂಬುವ ಭಾವುಕರೂ ಇದ್ದಾರೆ. ಅವರು ಕಕ್ಕಯ್ಯನೆಂಬ ಶಿವಶರಣನ ಪ್ರಸಾದದಿಂದ ಜನಿಸಿದರೆಂದು ಪ್ರೌಢರಾಯನ ಕಾವ್ಯದಲ್ಲಿಯೂ, ಶಿವಪ್ರಸಾದದಿಂದ ಜನಿಸಿದರೆಂದು ಚನ್ನಬಸವ ಪುರಾಣದಲ್ಲಿಯೂ, ಬಸವಣ್ಣನವರ ಪ್ರಸಾದದಿಂದ ಜನಿಸಿದರೆಂದು ಪ್ರಭುಲಿಂಗ ಲೀಲೆಯಲ್ಲಿಯೂ ಉಕ್ತವಾಗಿದೆ. ಇದರಿಂದ ಚನ್ನಬಸವಣ್ಣ ಪ್ರಸಾದಶರೀರಿಯೆಂಬುದನ್ನು ಎಲ್ಲ ಶರಣರೂ ಮನಗಂಡಿದ್ದರೆಂದು ವ್ಯಕ್ತವಾಗುತ್ತದೆ. ಜೀವ

ದಲ್ಲಿ ಎಂದರೆ ಶಿವಭಕ್ತರಲ್ಲಿ ಪದಾರ್ಥಶರೀರಿ ಮತ್ತು ಪ್ರಸಾದಶರೀರಿ ಎಂದು ಎರಡು ವಿಧಗಳುಂಟು. ಪದಾರ್ಥದೇಹಿಯು ನಾನಾ ಕ್ಲೇಶ ಪರಂಪರೆಯನ್ನು ಶಿವಭಕ್ತಿಯ ಆಚರಣೆಯಿಂದ ಪರಿಹರಿಸಿ ಕೊಂಡು ಭಕ್ತಸ್ಥಲ, ಮಹೇಶಸ್ಥಲಗಳನ್ನು ಸಾಧಿಸಿ ಪ್ರಸಾದ ದೇಹಿಯಾಗುತ್ತಾನೆ. ಆಗ ಅವನಲ್ಲಿ ಅನಂತ ಜ್ಞಾನಪ್ರಭೆ ಮಿಂಚುತ್ತದೆ. ಅವನು ಸಮ್ಯಕ್ ಜ್ಞಾನಿಯಾಗುತ್ತಾನೆ. ವೀರ ಶೈವ ಧರ್ಮದಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ–ಎಂಬ ಆರು ಸ್ಥಲ ಅಥವಾ ಹಂತಗಳನ್ನು ನಿರ್ಧರಿಸು ತ್ತಾರೆ. ಇವು ಜೀವನದ ಉತ್ತರೋತ್ತರ ಸಾಧನೆಯ ಬೆಳವಣಿಗೆ ಯನ್ನು ಸೂಚಿಸುತ್ತವೆ. ಚನ್ನಬಸವಣ್ಣನವರು ಕಾರಣಪುರುಷ ರಾದ್ದರಿಂದ ಅವರು ಪ್ರಸಾದ ದೇಹಿಯಾಗಿಯೇ ಜನಿಸಿದರೆಂದು ಅರ್ಥವಾಗುತ್ತದೆ. ಇಂಥ ಪುಣ್ಯಜೀವರು ಪೂರ್ವಜನ್ಮ ಪುಣ್ಯ ಪರಿಪಾಕದಿಂದ ಅವತರಿಸುತ್ತಾರೆಂದು ಸನಾತನ ಧರ್ಮ ನಂಬು ತ್ತದೆ. ಮಹಾ ಶಿವಯೋಗಿಯ ಪ್ರಸಾದದಿಂದ ಅಕ್ಕ ನಾಗಮ್ಮ ಗರ್ಭವತಿಯಾದಳು. ಪ್ರಸಾದಶರೀರಿ ಚನ್ನಬಸವಣ್ಣನನ್ನು ಪಡೆದಳು. ಇದು ನಿಜ ಜೀವನದ ದೃಷ್ಟಿ. ಆಕೆಗೆ ಪತಿಯೇ ಇರಲಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಮಹಾತ್ಮಾ ಏಸುಕ್ರಿಸ್ತ ಕನ್ಯಾಮಣಿ ಮೇರಿಯ ಹೊಟ್ಟೆಯಲ್ಲಿ ಹುಟ್ಟಿದನೆಂಬ ಭಾವನೆ ಯಿದೆ. ಇದು ಕ್ರೈಸ್ತರ ಅಚಲವಾದ ನಂಬುಗೆ, ಇದರಂತೆಯೇ, ಅಗಸ್ತ್ಯ, ದ್ರೋಣ, ಕರ್ಣ ಮತ್ತು ಇತರ ಪಾಂಡುಪುತ್ರರೂ ಮಂತ್ರ ಬಲದಿಂದ ಉದಯವಾದರೆಂಬ ಪ್ರತೀತಿ ಅನೂಚಾನವಾಗಿ ಬೆಳೆದುಬಂದಿದೆ. ದಶರಥ ಚಕ್ರವರ್ತಿ ಪುತ್ರಕಾಮೇಷ್ಟಿಯಾಗ ಮಾಡಿದಾಗ ಅಗ್ನಿ ಪುರುಷನು ಕೊಟ್ಟ ಪಾಯಸ ಪ್ರಸಾದಬಲ ದಿಂದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಅವತಾರ ಮಾಡಿದ

ರೆಂದು ರಾಮಾಯಣದಲ್ಲಿ ಉಕ್ತವಾಗಿದೆ. ಈಗಲೂ ಬಹಳ ಕಾಲ ಸಂತಾನ ಪ್ರಾಪ್ತಿಯಾಗಲಿಲ್ಲವೆಂದು ದಂಪತಿಗಳು ವ್ರತ ನೇಮಗಳನ್ನು ಆಚರಿಸುವುದುಂಟು. ಕಂಡ ಕಂಡ ದೇವರಿಗೆ ಹರಕೆ ಹೊರುತ್ತಾರೆ. ಎಲ್ಲ ಸಂದರ್ಭಗಳಲ್ಲಿಯೂ ದಾಂಪತ್ಯ ಜೀವನದಿಂದಲೇ ಸಂತಾನ ಪ್ರಾಪ್ತಿಯಾಗುತ್ತದೆಂಬುದು ಪ್ರಕೃತಿ ನಿಯಮ. "ಹೊಲೆ ಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ" ಎಂಬ ತತ್ತ್ವವನ್ನು ಬಸವಣ್ಣನವರು ಸ್ಪಷ್ಟವಾಗಿ ಪ್ರಕೃತಿ ಧರ್ಮ ವನ್ನು ಅಂಗೀಕರಿಸಿರುತ್ತಾರೆ. ಚನ್ನಬಸವಣ್ಣನವರ ಜನ್ಮ ವೃತ್ತಾಂತವನ್ನು ಕವಿಗಳು ಅದ್ಭುತ ಪವಾಡದಂತೆ ವರ್ಣಿಸಿದ್ದರೂ, ಎಲ್ಲ ಮಾನವರಂತೆಯೇ ಆತನು ತಾಯಿ ನಾಗಲಾಂಬಿಕೆಯ ಗರ್ಭದಲ್ಲಿ ಶಿವಸ್ವಾಮಿಯ ಪುತ್ರನಾಗಿ ಜನಿಸಿದನೆಂಬುದು ನಿಜ. ಅಭಿನವ ಕೈಲಾಸವೆನಿಸಿದ ಕಲ್ಯಾಣದಲ್ಲಿ ಚನ್ನಬಸವಣ್ಣನವರ ಅವತಾರವಾಯಿತೆಂದು ಅನೇಕ ವಿದ್ವಾಂಸರು ಹೇಳುತ್ತಾರೆ. ಆದರೆ, ಬಸವಣ್ಣನವರು ಕೂಡಲ ಸಂಗಮ ಕ್ಷೇತ್ರವನ್ನು ಬಿಟ್ಟು ಅಕ್ಕನಾಗಲಾಂಬಿಕೆ ಮತ್ತು ಭಾವ ಶಿವಸ್ವಾಮಿಯ ಸಂಗಡ ಕಲ್ಯಾಣಕ್ಕೆ ಬರುವ ವೇಳೆಗೆ ಚನ್ನಬಸವಣ್ಣನವರಿಗೆ ಸುಮಾರು ಎರಡು ವರ್ಷ ವಯಸ್ಸಾಗಿದ್ದಿತೆಂದು ಕೆಲವರು ಪಂಡಿತರು ತರ್ಕಿಸುತ್ತಾರೆ. ಬಸವಣ್ಣನವರು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಕೂಡಲ ಸಂಗಮದಿಂದ ಕಲ್ಯಾಣಕ್ಕೆ ಬಂದರೆಂದು ವೀರಶೈವ ವಾಙ್ಮಯದಿಂದ ಧ್ವನಿತವಾಗುತ್ತದೆ.

೩

"ಚನ್ನಬಸವಣ್ಣನವರ ಗುರು ಬಸವಣ್ಣನವರೆಂದು ಸ್ಪಷ್ಟ ವಾಗಿದೆ. ಚನ್ನಬಸವಣ್ಣ ತಾಯಿಯ ಗರ್ಭದಲ್ಲಿದ್ದಾಗಲೇ

ಎಂಟನೆಯ ತಿಂಗಳಿನಲ್ಲಿ ವೀರಶೈವ ಧರ್ಮದಂತೆ ತಾಯಿಯ ಗರ್ಭಕ್ಕೆ ಲಿಂಗಧಾರಣೆ ಮಾಡಿ, ಬಸವಣ್ಣನವರು ಅನುಗ್ರಹಿಸಿದರು.

"ಧರೆಯಾಕಾಶವಿಲ್ಲದಂದು, ಅನಲ, ಪವನ, ಜಲ, ಕೂರ್ಮರಿಲ್ಲದಂದು; ಚಂದ್ರ ಸೂರ್ಯರೆಂಬುವರು ಕಳೆದೋರದಂದು; ಆತ್ಮಸ್ಥಲ ಅನುಭಾವಕ್ಕೆ ಬಾರದಂದು; ನಿತ್ಯ ನಿಜಲಿಂಗವ ಬಲ್ಲರಾರಯ್ಯಾ ನೀವಲ್ಲದೆ?; ಮಹಾ ಘನಕ್ಕೆ ಘನ ಸಾಹಸವಾಗಿ ಅಗಮ್ಯಸ್ಥಲವಲ್ಲಿ ನಿಂದು; ಭರಿತರಾಗಿರಬಲ್ಲರಾರಯ್ಯ ನೀವಲ್ಲದೆ?; ನಿಮ್ಮ ಒಕ್ಕ ಮಿಕ್ಕ ಶೇಷ ಪ್ರಸಾದದ ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ; ವಿಭೂತಿ ಪಟ್ಟವ ಕಟ್ಟಿ ಹಸ್ತಮಸ್ತಕ ಸಂಯೋಗವಮಾಡಿ; ಎನ್ನನುಳಿಹಿದರಾರಯ್ಯಾ ನೀವಲ್ಲದೇ?; ಕೂಡಲ ಚನ್ನಸಂಗಮ ದೇವರ ಸಾಕ್ಷಿಯಾಗಿ; ನಾನು ನಿಮ್ಮ ಕರುಣದ ಕಂದನೆಂಬುದ ಮೂರುಲೋಕ ಬಲ್ಲುದು ಕಾಣಾ, ಸಂಗನ ಬಸವಣ್ಣ."

ಎಂದು ಚನ್ನಬಸವಣ್ಣನವರು ತಮ್ಮ ಒಂದು 'ವಚನ'ದಲ್ಲಿ ಹೇಳಿರುತ್ತಾರೆ. ಬಸವಣ್ಣನವರ ಪ್ರಸಾದದಿಂದ ತಾವು ಅವತಾರ ಮಾಡಿದರೆಂದೂ, ತಾವು ಶಿಶುರೂಪದಲ್ಲಿ ಮಾತೃಗರ್ಭದಲ್ಲಿದ್ದಾಗಲೇ ಬಸವಣ್ಣನವರಿಂದ ವಿಭೂತಿ ಪಟ್ಟವನ್ನು ಪಡೆದರೆಂದೂ, ಬಸವಣ್ಣನವರು ಹಸ್ತಮಸ್ತಕ ಸಂಯೋಗ ಮಾಡಿ ತಮಗೆ ಲಿಂಗದೀಕ್ಷೆಯನ್ನಿತ್ತರೆಂದೂ ಈ ವಚನದಲ್ಲಿ ನಿರೂಪಿಸಿರುತ್ತಾರೆ. ಆದ್ದರಿಂದ ಬಸವಣ್ಣನವರೇ ಚನ್ನಬಸವಣ್ಣನವರ ಪರಮ ಗುರುವೆಂಬುದರಲ್ಲಿ ಸಂದೇಹವಿಲ್ಲ. ಬಾಲ ಚನ್ನಬಸವಣ್ಣ ತಾಯಿಯ ಕಣ್ಮಣಿ; ತಂದೆಯ ಶಿರೋಮಣಿ; ಸೋದರಮಾವ ಬಸವಣ್ಣನವರ ಚಿಂತಾಮಣಿ; ಗಂಗಾಂಬಿಕೆ ನೀಲಾಂಬಿಕೆಯರ ಚೂಡಾ

ಮಣಿಯಂತೆ ಕಲ್ಯಾಣದ ಮಹಾಮನೆಯಲ್ಲಿ ಶಿವಶರಣ ಸಂಗೋಷ್ಠಿಯಲ್ಲಿ ಬೆಳೆದನು. ಚನ್ನಬಸವಣ್ಣ ಎತ್ತ ನೋಡಿದರೂ ಶಿವಲಿಂಗದರ್ಶನವೇ. ಎಲ್ಲಿ ನೋಡಿದರೂ ಜಂಗಮ ತಿಂತಿಣಿಯೇ! ಇಂಥ ಪುಣ್ಯಾವರಣದಲ್ಲಿ ಆ ಶಿಶು ಶಿವಜ್ಞಾನ ಸಂಪನ್ನವಾಗುತ್ತಿತ್ತು! ಹಗಲಿರುಳೂ ಬಸವಣ್ಣನವರ ಮಹಾಮನೆಯಲ್ಲಿ ನಡೆಯುತ್ತಿದ್ದ ಶಿವಪೂಜೆ; ಶಿವಧ್ಯಾನ; ಶಿವಭಕ್ತಿ; ಶಿವಸಂಗೋಷ್ಠಿ; ಶಿವಪುರಾಣ ಶ್ರವಣ–ಇವುಗಳ ಬಲದಿಂದ ಚನ್ನಬಸವಣ್ಣನವರಲ್ಲಿ ನಿರ್ಮಲ ಶಿವಜ್ಞಾನಪ್ರಭೆ ಬೆಳಗಿತು; ಐದನೆಯ ವಯಸ್ಸಿನಲ್ಲಿ ಬಸವಣ್ಣನವರು ಬಾಲಕ ಚನ್ನಬಸವಣ್ಣನವರಿಗೆ ಅಕ್ಷರಾಭ್ಯಾಸವನ್ನು ಪ್ರಾರಂಭ ಮಾಡಿಸಿದರು; ಎಂಟನೆಯ ವಯಸ್ಸಿನಲ್ಲಿ ಶಿವದೀಕ್ಷಾ ಸಂಸ್ಕಾರವನ್ನೂ ನೆರವೇರಿಸಿದರು. ಶಿವಶರಣ ಪುರುಷರು ಶಿವಶರಣ ಸಂಗೋಷ್ಠಿಯಲ್ಲಿ ತಮ್ಮ ಬಾಲ್ಯವನ್ನು ಕಳೆದರು. ವೇದ, ಆಗಮ, ಉಪನಿಷತ್ತುಗಳನ್ನು ಕಲಿತು ಪ್ರವೀಣರಾದರು; ವೀರಶೈವಧರ್ಮ, ಸಾಹಿತ್ಯ, ಶಿವಾಗಮಗಳಲ್ಲಿ ನಿಷ್ಣಾತರಾದರು; ಚಾರ್ವಾಕ, ಜೈನ ಮತ್ತು ಬೌದ್ಧಧರ್ಮಗಳಲ್ಲಿ ಪಂಡಿತರಾದರು. ಬಸವಣ್ಣನವರೇ ಸೋದರ ಅಳಿಯನಿಗೆ ಲಿಂಗಾಚಾರ್ಯರಾದರು!

"ಬಸವಣ್ಣಾ, ಓಂಕಾರದಿಂದತ್ತತ್ತ ನೀನೆ; ನಾದ ಬಿಂದು ಕಳೆಗಳಿಂದತ್ತತ್ತ ನೀನೆ; ಪ್ರಥಮಾಚಾರ್ಯ ನೀನೆ, ಲಿಂಗಾಚಾರ್ಯ ನೀನೆ; ಜಂಗಮಾಚಾರ್ಯ ನೀನೆ; ಪ್ರಸಾದಾಚಾರ್ಯ ನೀನೆ; ಎನಗೆ ಸರ್ವಾಚಾರ್ಯ ನೀನೆ; ನೀನೆ ಗತಿ ಮತಿಯಾಗಿ ಎನ್ನನಾಳುಹಿದ ಕಾರಣ, ಕೂಡಲ ಚನ್ನಸಂಗಮ ದೇವಾ, ಆವರ್ಣವಿಲ್ಲದಂದು ಓಂ ನಮಃ ಶಿವಾಯ ಎನುತಿರ್ದೆನು."–ಎಂದು ಚನ್ನಬಸವಣ್ಣನವರು ತುಂಬ ಭಕ್ತಿಯಿಂದ ಬಸವಣ್ಣ

ನವರಿಗೆ ತಮ್ಮ ಭಕ್ತಿದಕ್ಷಿಣೆಯನ್ನು ಅರ್ಪಿಸಿದ್ದಾರೆ. ಅವರು ಬಸವಣ್ಣನವರನ್ನು ತನ್ನ ಪ್ರಥಮಾಚಾರ್ಯರೆಂದು ಗೌರವಿಸಿರುತ್ತಾರೆ; ತನ್ನ ಸರ್ವಾಚಾರ್ಯರೆಂದು ಪೂಜಿಸಿರುತ್ತಾರೆ. ಬಸವಣ್ಣ–ಚನ್ನಬಸವಣ್ಣನವರ ಸಂಬಂಧ ಜನ್ಮ ಜನ್ಮಾಂತರಗಳಿಂದ ಬಂದುದೇನೋ! ಪರಮಗುರು ಬಸವಣ್ಣನವರ ಉಪದೇಶದಿಂದ ಚನ್ನಬಸವಣ್ಣನವರಿಗೆ ಗುರುಕಾರುಣ್ಯ ಲಭಿಸಿದಂತಾಯಿತು. ಅದು ಜ್ಯೋತಿಯಲ್ಲೊದಗಿದ ಜ್ಯೋತಿಯಂತಾಯಿತ್ತು; ದರ್ಪಣದೊಳಗಣ ಪ್ರತಿಬಿಂಬದಂತಾಯಿತ್ತು; ಉದಕದೊಳಗಿರಿಸಿದ ರತ್ನದಂತಾಯಿತ್ತು; ರೂಪಿನ ನೆಳಲಿನ ಅಂತರಂಗದಂತಾಯಿತ್ತು; ದರ್ಪಣಕ್ಕೆ ದರ್ಪಣವ ತೋರಿದಂತಾಯಿತ್ತು–ಎಂದು ಆ ಶಿಷ್ಯ ಚನ್ನಬಸವಣ್ಣನವರು ತಮ್ಮ ವಚನಾಮೃತದಿಂದ ಶ್ರೀಗುರುಪಾದಸೇವನೆ ಮಾಡಿರುತ್ತಾರೆ! ಆ ಶ್ರೀಗುರು ಸಾಮಾನ್ಯರಲ್ಲ! ಹರನೇ ಗುರುರೂಪದಿಂದ ಚನ್ನಬಸವಣ್ಣನವರನ್ನು ಉದ್ಧರಿಸಲು ಮರ್ತ್ಯದಲ್ಲಿ ಬಸವಣ್ಣನವರಾಗಿ ಬಂದಿದ್ದಾರೆ! ಅವರು ಚನ್ನಬಸವಣ್ಣನವರ ಮನಸ್ಥಲಕ್ಕೆ ಮಂತ್ರವಾದರು! ತನುಸ್ಥಲಕ್ಕೆ ಪ್ರಸಾದವಾದರು! ಕರಸ್ಥಲಕ್ಕೆ ಲಿಂಗವಾದರು! ಪ್ರಾಣಸ್ಥಲಕ್ಕೆ ಜಂಗಮವಾದರು! ಈ ಚತುರ್ವಿಧಸ್ಥಲದಲ್ಲಿ ಸಾಹಿತ್ಯವಾದರು! ಬಸವಣ್ಣನವರು ಮಹಾಜ್ಞಾನಿ ಚನ್ನಬಸವಣ್ಣನವರಿಗೆ ಗುರುಲಿಂಗ ಜಂಗಮ ಸ್ವರೂಪಿಯಾಗಿ ನಿಂತರು. ಇಂಥ ಗುರುಸನ್ನಿಧಿಯಲ್ಲಿ ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಚನ್ನಬಸವಣ್ಣನವರು ಷಟ್ಸ್ಥಲ ಜ್ಞಾನಸಂಪನ್ನರಾದರು! ಷಣ್ಮುಖನ ಅವತಾರವೇ ಚನ್ನಬಸವಣ್ಣನವರೆಂದು ಶರಣರು ನಂಬಿದರು! "ಶಿಷ್ಯಾದಿಚ್ಛೇತ್ ಪರಾಜಯಂ"—ಎಂಬಂತೆ ಸದ್ಗುರು ಯಾವಾಗಲೂ ತನ್ನ ಶಿಷ್ಯ ತನಗಿಂತಲೂ ಮಹೋನ್ನತನಾಗಬೇಕೆಂದು ಬಯಸುತ್ತಾನೆ.

ಅದರಂತೆಯೇ ಬಸವಣ್ಣನವರು—“ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ!; ಸುಗಂಧಬಂಧ ಬಂಧುರದಂತೆ ಹುಟ್ಟುತ್ತದೆ ಪರಿಮಳ; ಆದಿಅನಾದಿ ಇಲ್ಲದ ಮುನ್ನವೆ ತನ್ನಿಂದವೆ ತಾನಾದ ಕಾರಣ; ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು ಲಿಂಗ ಸ್ವಯವಾಗಿ; ಎನಗೆ ಗತಿಪಥವ ತೋರಬೇಕೆಂದು ಹಾಗಾದನು; ಕೂಡಲ ಸಂಗಮದೇವರಲ್ಲಿ ಚನ್ನಬಸವಣ್ಣನು”— ಎಂದು ಹೇಳಿರುತ್ತಾರೆ. ಚನ್ನಬಸವಣ್ಣನವರು ಕಾರಣ ಪುರುಷ ರೆಂದೂ ತಮಗೆ ಗತಿಪಥವನ್ನು ತೋರಿಸಬಲ್ಲ ಸಮರ್ಥ ಗುರು ವೆಂದೂ ಬಸವಣ್ಣನವರು ಮನವಾರೆ ಪ್ರಶಂಸಿಸಿದ್ದಾರೆ! ಚನ್ನ ಬಸವಣ್ಣನವರ ಅಂಗಸೌಷ್ಟವ ಲೋಕೋತ್ತರವಾಗಿತ್ತು. ಅವರ ಮುಖ ಮಂಡಲದಲ್ಲಿ ಆತ್ಮತೇಜಸ್ಸು ತುಂಬಿ ತುಳುಕುತ್ತಿತ್ತು! ಸುದೃಢವಾದ ದೇಹಸಂಪತ್ತು; ಅದರಲ್ಲಿ ಮಹಾನುಭಾವ ಗಾಂಭೀರ್ಯ ಹೊರಹೊಮ್ಮುತ್ತಿತ್ತು! ವಿಶಾಲವಾದ ವಕ್ಷಸ್ಥಲ; ಆಜಾನುಬಾಹುದ್ವಯ! ಚಂದ್ರಲಿಲಾಟದಲ್ಲಿ ತ್ರಿಪುಂಡ್ರ; ಶೋಭಿಸುತ್ತಿತ್ತು! ರುದ್ರಾಕ್ಷಿ ಮಾಲಾಲಂಕಾರ ಒಪ್ಪುತ್ತಿತ್ತು! ಬಂಗಾರದ ಮೈ ಬಣ್ಣದೊಂದಿಗೆ ಕಾವಿಯುಡುಗೆಯ ಕಾಂತಿ ಚಿಮ್ಮುತ್ತಿತ್ತು! ಭವ್ಯರೂಪ; ದಿವ್ಯದೇಹ! ಹತ್ತು ವರ್ಷ ವಯಸ್ಸಿನಲ್ಲಿಯೇ ಅವರ ಹೃದಯದಲ್ಲಿ ಜ್ಞಾನಜ್ಯೋತಿ ಬೆಳಗುತ್ತಿತ್ತು!

ಬಸವಣ್ಣನವರ ಧರ್ಮೋದ್ಧಾರ ಕಾರ್ಯಗಳಲ್ಲಿ ಚನ್ನಬಸವಣ್ಣ ನವರು ಸಹಾಯಕರಾಗಿದ್ದರು; ಅನುಭವಮಂಟಪದಲ್ಲಿ ಆಚಾರ್ಯಪುರುಷರಾಗಿದ್ದರು! ಅವರ ಇಷ್ಟಲಿಂಗಪೂಜಾ ತಪಸ್ಸು ವರ್ಧಿಸುತ್ತಿತ್ತು! ಅನುಭವಮಂಟಪವೇ ಅವರ ತಪೋಭೂಮಿಯಾಯಿತು! ಬಾಲ್ಯದಲ್ಲಿಯೇ ಅವರಿಗೆ ಅನುಭವ

ಮಂಟಪದಲ್ಲಿ ವಿಭೂತಿಪುರುಷರ ಅನುಗ್ರಹ ಲಭಿಸಿತು! ಶರಣರ ಪ್ರತ್ಯಕ್ಷ ದರ್ಶನ ಲಾಭ ದೊರೆಯಿತು. ಶರಣರ ಶಿವಾನುಭವ ಪ್ರಭೆ ಅವರ ಮನಃ ಪಟಲದ ಮೇಲೆ ಪ್ರತಿಬಿಂಬಿಸಿತು. ಆದರಿಂದ ಅವರಲ್ಲಿ ಷಟ್ಸ್ಥಲ ಜ್ಞಾನ ಮಂದಾಕಿನಿ ನಿರ್ಮಲವಾಗಿ ಹರಿಯಿತು; ಆ ಧರ್ಮವಾಹಿನಿಯಲ್ಲಿ ಲೋಕ ತೀರ್ಥಸ್ನಾನ ಮಾಡಿತು. ಗುರು ಪರಮಗುರುವಾದನು; ಜಂಗಮ ಮಹಾಜಂಗಮನಾದನು; ಭಕ್ತ ನಿಜಭಕ್ತನಾದನು. ವಯೋಧರ್ಮವನ್ನು ಅನುಸರಿಸಿ ಜ್ಞಾನ ಬೆಳೆಯುವುದಿಲ್ಲ. ಅದು ವ್ಯಕ್ತಿಯ ಸಾಧನೆ ಮತ್ತು ಸಂಸ್ಕಾರಗಳನ್ನು ಅನುಸರಿಸಿ ಬೆಳೆಯುತ್ತದೆ. ಚಿನ್ನದ ಪಾತ್ರೆಯಾಗಲಿ, ಬೆಳ್ಳಿಯ ಪಾತ್ರೆಯಾಗಲಿ ಅದನ್ನು ಬೆಳಗಿ ತೊಳೆದರೆ ಮಾತ್ರವೇ ಅದರ ನಿಜ ಗುಣ ಪ್ರಕಾಶಿಸೀತು! ರತ್ನ ದರ್ಪಣವಾದರೂ ಅದರ ಮೇಲೆ ಬೀಳುವ ಧೂಳನ್ನು ಒರೆಸಿ ಸ್ವಚ್ಛಗೊಳಿಸಿದರೆ ಮಾತ್ರವೇ ಆ ರತ್ನದರ್ಪಣ ಬೆಳಗೀತು! ಚನ್ನಬಸವಣ್ಣನವರು ಪೂರ್ವ ಜನ್ಮ ಸಂಸ್ಕಾರದಿಂದ ಮಹಾಜ್ಞಾನಿಯಾಗಿದ್ದರೂ, ಅವರ ಷಟ್ಸ್ಥಲ ಸಾಧನೆ ಮತ್ತು ಆತ್ಮಸಂಸ್ಕಾರಗಳಿಂದ ಮಹಾ ಮಹಂತರಾದರು! ಅವರ ಹೃದಯವಾಣಿಯಲ್ಲಿ ಲೋಕ ಶಾಂತಿ ಮಿಂಚಿತು; ಮಿಂಚಿ ಬೆಳಕಾಯಿತು; ಅವರು ಬೆಳಗಿನಲ್ಲಿ ಬೆಳಗಾದರು; ಶಿವತತ್ತ್ವ ಪರಂಜ್ಯೋತಿಯಾದರು; ಅವರ ಅಸಾಧಾರಣ ಶಿವಚೈತನ್ಯವನ್ನು ಕಂಡು ಶರಣರು ಪರಮಾನಂದ ಭರಿತರಾದರು. ಅಷ್ಟು ಕಿರಿಯ ವಯಸ್ಸಿನಲ್ಲಿಯೇ ಅವರು ಅನುಭವ ಮಂಟಪದಲ್ಲಿ ಪರಮಾಚಾರ್ಯರಾದರು;

ಚನ್ನಬಸವಣ್ಣನವರು ಧರ್ಮಜ್ಞಾನ ಪರಾಯಣರಾಗಿದ್ದಂತೆಯೇ ಲೋಕ ವ್ಯವಹಾರಚತುರರೂ ಆಗಿದ್ದರು. ಎಂಥ ದುಸ್ತರ ಪರಿಸ್ಥಿತಿಯಲ್ಲಿಯೂ ಅವರ ಪ್ರತಿಭೆ ಮಂಕಾಗುತ್ತಿರಲಿಲ್ಲ.

ಅವರು ಬಸವಣ್ಣನವರಿಗೆ ಆಪ್ತ ಬಂಧುವಿನಂತೆಯೂ ಅಂತರಂಗ ಸಚಿವನಂತೆಯೂ ಇದ್ದರು. ಇಷ್ಟಾದರೂ, ಅವರು ಎಂದೂ, ಸಲುಗೆಯಿಂದ ಎಚ್ಚರದಪ್ಪಿ ಬಸವಣ್ಣನವರನ್ನು ಉದಾಸೀನ ಭಾವದಿಂದ ನೋಡುತ್ತಿರಲಿಲ್ಲ! ಮಹಾ ದಯಾನಿಧಿ ಬಸವಣ್ಣನವರು ಯಾವುದೇ ಧರ್ಮ ಸಂಕಟದಲ್ಲಿ ಸಿಕ್ಕಿದಾಗಲೂ ಅವರು ಕಾಲೋಚಿತ ಧರ್ಮ ಸ್ವರೂಪವನ್ನು ತಿಳಿಸಿ, ಬಸವಣ್ಣನವರಿಗೆ ಕಣ್ಬೆಳಕಾಗಿ ನಿಲ್ಲುತ್ತಿದ್ದರು; ಹೃದಯಜ್ಯೋತಿಯಾಗಿ ಬೆಳಗುತ್ತಿದ್ದರು. ಪ್ರಭುದೇವರು ಸಿದ್ಧರಾಮರೊಂದಿಗೆ ಕಲ್ಯಾಣಕ್ಕೆ ಬಂದ ಸಮಯದಲ್ಲಿ ಆ ಪ್ರಭು–ಬಸವ ಸಮಾಗಮ ಸನ್ನಿವೇಶದಲ್ಲಿ ಚನ್ನಬಸವಣ್ಣನವರು ವಹಿಸಿದ ಪಾತ್ರ ಅದ್ವಿತೀಯವಾದುದು. ಅವರಿಂದ ಬಸವಣ್ಣನವರ ಭಕ್ತಿ ಬೆಳಗಿತು! ಅಲ್ಲಮರ ಶಕ್ತಿ ಹೊಳೆಯಿತು! ಸಿದ್ಧರಾಮರ ಮನಸ್ಸು ಅರಳಿತು!

೪

ಅಲ್ಲಮಪ್ರಭು ಶರಣಯುಗದಲ್ಲಿ ಪರಮ ವೈರಾಗ್ಯ ಮೂರ್ತಿಯೆನಿಸಿಕೊಂಡಿದ್ದರು. ಅವರು ಆತ್ಮಜ್ಞಾನಿ; ಜೀವನ್ಮುಕ್ತ! ಅವರು ಬಸವಣ್ಣನವರ ಕೀರ್ತಿಯನ್ನು ಕೇಳಿ, ಬನವಾಸಿ ಪ್ರಾಂತದಿಂದ ಹೊರಟು ಕಲ್ಯಾಣದತ್ತ ಬಂದರು. ಮಾರ್ಗಮಧ್ಯದಲ್ಲಿ ಸೊಲ್ಲಾಪುರದ ಸಿದ್ಧರಾಮರನ್ನು ಸಂದರ್ಶಿಸಿ, ಅವರ ಕರ್ಮಯೋಗ ಸ್ವರೂಪವನ್ನು ಅರಿತರು. ಸಿದ್ಧರಾಮರೇನೂ ಸಾಮಾನ್ಯರಲ್ಲ! ಅವರು ಕರ್ಮಯೋಗದಲ್ಲಿ ಸಿದ್ಧಿಯನ್ನು ಪಡೆದಿದ್ದರು. ಆ ಕರ್ಮಯೋಗಿ ಅನೇಕ ಪ್ರಜೋಪಕಾರ ಕಾರ್ಯಗಳನ್ನು ಮಾಡುತ್ತಾ, ಪ್ರಾಣಿಕೋಟಿಯನ್ನು ಉದ್ಧರಿಸುತ್ತಿದ್ದರು. ಅವರು ಆ ಪುಣ್ಯಕ್ಷೇತ್ರದಲ್ಲಿಯೇ ವಿಶಾಲವಾದ ಕೆರೆ

ಯೊಂದನ್ನು ನಿರ್ಮಿಸುತ್ತಿದ್ದ ಸಮಯದಲ್ಲಿ ಅಲ್ಲಮರು ಸೊನ್ನಲಾಪುರಕ್ಕೆ ಬಂದರು. ಲೌಕಿಕ ವ್ಯಾಪಾರದಲ್ಲಿ ಮಗ್ನರಾಗಿದ್ದ ಸಿದ್ಧರಾಮರ ಕರ್ಮಯೋಗವನ್ನು ಅಲ್ಲಮರು ಮೆಚ್ಚಲಿಲ್ಲ! ಅವರನ್ನು ನಿತ್ಯಸತ್ಯದ ಕಡೆಗೆ ಒಯ್ಯಲು ಅಲ್ಲಮರು ಅಪೇಕ್ಷಿಸಿ, ಸಿದ್ಧರಾಮರಿಗೆ ಶಿವಯೋಗ ಸ್ವರೂಪವನ್ನು ತಿಳಿಸಿ, ಅವರನ್ನು ಕರೆದುಕೊಂಡು ಪರಮ ಶಿವಧರ್ಮನಿಷ್ಠ ಬಸವಣ್ಣನವರನ್ನು ಸಂದರ್ಶಿಸಲು ಕಲ್ಯಾಣದ ಕಡೆಗೆ ಹೊರಟರು.

ಅಲ್ಲಮ ಮತ್ತು ಸಿದ್ಧರಾಮರು ಕಲ್ಯಾಣದಲ್ಲಿ ಬಸವಣ್ಣನವರ ಮನೆಯಹತ್ತಿರ ಬಂದರು! ಆ ವಿಚಾರವನ್ನು ಹಡಪದ ಅಪ್ಪಣ್ಣ ಶಿವಪೂಜಾಗೃಹದಲ್ಲಿದ್ದ ಬಸವಣ್ಣನವರಿಗೆ ಅರಿಕೆ ಮಾಡಿದನು. ಆ ಸಮಯದಲ್ಲಿ ಇಷ್ಟಲಿಂಗಾರ್ಚನೆಯಲ್ಲಿ ನಿರತರಾಗಿದ್ದ ಬಸವಣ್ಣನವರು 'ಕೂಡಲಸಂಗನ ಶರಣರು ಬಂದರೆ ಉಪಚಾರಕ್ಕೆ ಇಂಬಿಲ್ಲ. ಕರುಣದಿಂದ ಬರಹೇಳಾ, ಅಪ್ಪಣ್ಣಾ!' ಎಂದು ನಿರೂಪಿಸಿದರು. ಅಪ್ಪಣ್ಣನ ಆಹ್ವಾನವನ್ನು ಪ್ರಭು ಮನ್ನಿಸಲಿಲ್ಲ. ತಾವು ಬಂದಿದ್ದ ವಿಚಾರವನ್ನು ತಿಳಿದೂ ಬಸವಣ್ಣನವರು ತಾವಾಗಿಯೇ ಬಂದು ತಮ್ಮನ್ನು ಸ್ವಾಗತಿಸಲಿಲ್ಲ ಎಂಬ ದುಗುಡ ಪ್ರಭುವಿನಲ್ಲಿ ಮೂಡಿತು. "ಹಿರಿಯರು ಬಂದರೆ ಇದಿರೆದ್ದು ಬಾರದವರ ಮನೆಗೆ ಅಡಿಯಿಡೆವು" ಎಂದು ಅಲ್ಲಮರು ನಿಷ್ಠುರವಾಗಿಯೇ ಅಪ್ಪಣ್ಣನಿಗೆ ಹೇಳಿದರು. ಆ ಮಾತನ್ನು ಅಪ್ಪಣ್ಣನಿಂದ ಕೇಳಿದ ಬಸವಣ್ಣನವರು "ಕೂಡಲಸಂಗನ ಶರಣರ ಮನೆಯ ಬಾಗಿಲುಗಾಹಿ ನಾನಾಗಿರ್ದು, ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ" ಎಂದು ಸಮಾಧಾನ ಚಿತ್ತದಿಂದಲೇ ಹೇಳಿದರು. ಈ ಘೋರಣೆಯ ಆಹ್ವಾನ ಪ್ರಭುದೇವರಿಗೆ ಒಪ್ಪಿಗೆಯಾಗಲಿಲ್ಲ.

ವೀರಶೈವ ಧರ್ಮದಲ್ಲಿಯೇ ಇದೊಂದು ಮಹಾ ಸಮಾಗಮ ವೆನಿಸಬಹುದಾಗಿದ್ದ ಸನ್ನಿವೇಶ ವಿರಸದಲ್ಲಿ ಪರ್ಯವಸಾನ ವಾದೀತೆಂಬುದನ್ನು ಅಲ್ಲಿದ್ದ ಚನ್ನಬಸವಣ್ಣನವರು ಗ್ರಹಿಸಿದರು. ಆ ಸನ್ನಿವೇಶದಲ್ಲಿ ಚನ್ನಬಸವಣ್ಣನವರು ಮಹಾ ಮೇಧಾವಿ ಯಾಗಿ ನಡೆದುಕೊಂಡರು. "ಅಂಗದಮೇಲೆ ಲಿಂಗ ವುಳ್ಳುದೆಲ್ಲವು ಸಂಗಮನಾಥನೆಂದು ನಂಬಿದ ನಂಬುಗೆಯೂ ಬಂದ ಶರಣರ ನಿಲುವನರಿಯ.ದಿದ್ದರೆ ತಪ್ಪಿತ್ತು ನೋಡಾ, ಗುರುವೇ? 'ಸಂಗಮನಾಥ ಮನೆಗೆ ಅಂಗವಿಡಿದು ಬಂದರೆ ದಿಮ್ಮನೆ ಇದಿರೆದ್ದು ವಂದಿಸಬೇಕು ನೋಡಯ್ಯಾ!' ಕೂಡಲ ಚನ್ನಸಂಗನಶರಣರು ಪ್ರಭುದೇವರು ಸಿದ್ಧರಾಮಯ್ಯದೇವರು ಬಂದು ಬಾಗಿಲಲ್ಲಿರಲು ಕಣ್ಣರಿಯದಿದ್ದರೂ ಕರುಳರಿಯ ಬೇಡವೆ ಸಂಗನಬಸವಣ್ಣಾ"! ಎಂದು ಬಸವಣ್ಣನವರನ್ನು ಎಚ್ಚರಿಸಿದರು. ಎಂಥ ಸಮಯೋಚಿತಜ್ಞಾನ! ಚನ್ನಬಸವಣ್ಣನವರು ಇಂಗಿತಜ್ಞರು; ಗುಣಜ್ಞರು! ಬಸವಣ್ಣನವರ ಪರಿತಾಪ, ಅಲ್ಲಮರ ದುಗುಡ—ಈ ಉಭಯಾಗ್ನಿ ಶರಣ ಸಂಕುಲವನ್ನು ಸುಡುತ್ತಿತ್ತು? ಚನ್ನಬಸವಣ್ಣನವರು ತಮ್ಮ ಪುಣ್ಯವಚನ ಜಲದಿಂದ ಆ ಸಂತಾಪಾಗ್ನಿಯನ್ನು ಆರಿಸಿದರು. "ಭಕ್ತರ ಹೆಚ್ಚು ಕುಂದೆಂಬುದು ಜಂಗಮ ಹೆಚ್ಚು ಕುಂದೆಂಬುದನರಿಯೆಯಾ ಪ್ರಭುವೆ! ನಿನ್ನ ಪ್ರಾಣವೆ ಬಸವಣ್ಣನ ಪ್ರಾಣ; ಬಸವಣ್ಣನ ಪ್ರಾಣವೆ ನಿನ್ನ ಪ್ರಾಣ; ನಿನ್ನ ಕಾಯವೆ ಬಸವಣ್ಣನ ಕಾಯ; ಬಸವಣ್ಣನ ಕಾಯವೆ ನಿನ್ನ ಕಾಯ. ನೀವಿಲ್ಲದಿರೆ ಬಸವಣ್ಣನಿಲ್ಲ; ಬಸವಣ್ಣ ನಿಲ್ಲದಿರೆ ನೀವಿಲ್ಲ. ಇಂತೊಂದನೊಂದ ಬಿಚ್ಚಿ ಬೇರು ಮಾಡಬಾರ ದೆಂಬುದನರಿದು, ಮತ್ತೆ ಬರಿದೆ ಮುನಿವರೆ ಬಲ್ಲವರು? ನಡೆವಾಡುವ ಮಗ್ಗಿದರೆ ನಡೆಸಿಕೊಂಬುದಲ್ಲದೆ ಮಿಡಿಹರಿಯ

ಹೊಯ್ದರುಂಟೆ ಲೋಕದೊಳಗೆ? ಮರಹಿಂದ ಬಂದ ಗುಣವ ಸಂಪಾದಿಸದೆ ಬಿಡಯುಂಗೈವುದಯ್ಯಾ ನಿಮ್ಮ ಗೃಹಕ್ಕೆ. ಕೂಡಲ ಚನ್ನಸಂಗಮದೇವಾ, ನಿಮ್ಮ ಶರಣ ಬಸವಣ್ಣನಾರೆಂಬುದ ನಿಃಸೊಮ್ಮ ತಿಳಿದುನೋಡಾ ಪ್ರಭುವೆ?'' ಎಂದು ಚನ್ನಬಸವಣ್ಣ ವಿನಯದಿಂದ ನುಡಿದ ನುಡಿಯಿಂದ ಪ್ರಭು ಪ್ರಸನ್ನಚಿತ್ತರಾದರು. ಮಾತೇ ಮಾಣಿಕ್ಯವಲ್ಲವೆ? ಚನ್ನಬಸವಣ್ಣನವರ ಮಾತು ಮುತ್ತು; ಮಾತು ಲಿಂಗ? ಮಾತು ಪರಂಜ್ಯೋತಿ!

ಸಿದ್ಧರಾಮರು ಶರಣ ಸಂಗೋಷ್ಠಿಯಲ್ಲಿ ಭಾಗಿಯಾಗಲು ಅವರಿಗೆ ಇಷ್ಟಲಿಂಗಧಾರಣವಿಲ್ಲವೆಂಬ ಸಂಶಯ ಅನುಭವ ಮಂಟಪದಲ್ಲಿ ಮೂಡಿತು. ಬಸವಣ್ಣನವರೂ ಆ ಸಂಶಯವನ್ನೇ ಸಮರ್ಥಿಸಿದರು. "ಬೆಳಕು ಬೆಳಕು ಸೇರಿದರೆ ಕತ್ತಲೆ ಇರುತ್ತದೆಯೆ? ಶರಣರು ಶರಣರು ಶಿವಾನುಭವಗೋಷ್ಠಿಯಲ್ಲಿರಲು ಅವರ ಸಂಗದಲ್ಲಿದ್ದವರ ಅಜ್ಞಾನ ಅಳಿದು ನಿಜದ ನೆಲೆ ಗೋಚರಿಸುವುದಿಲ್ಲವೆ? ನಾನು ಶರಣರ ಸಾನ್ನಿಧ್ಯದಲ್ಲಿರುವುದರಿಂದ ನನಗೆ ಲಿಂಗಜ್ಞಾನ ಲಭಿಸುವುದಿಲ್ಲವೇ?" ಎಂದು ಸಿದ್ಧರಾಮರು ಆತ್ಮಲಿಂಗಜ್ಞಾನವನ್ನು ತಿಳಿಸಿದರು. ಅಂಗದ ಮೇಲೆ ಲಿಂಗವಿಲ್ಲದವನು ಶರಣನಾಗಲಾರನು. ಅಂಥವರು ಶಿವಶರಣ ಸಂಗೋಷ್ಠಿಯಲ್ಲಿರಲು ಸಾಧ್ಯವಿಲ್ಲವೆಂಬುದು ಶರಣರ ಅಭಿಪ್ರಾಯ. ತಮಗೆ ಗುರುಕೃಪೆಯಿಂದ ಲಿಂಗಧಾರಣೆಯಾಗಿಲ್ಲದಿದ್ದರೂ ತಾವು ಲಿಂಗಾಂಗಿಯೆಂಬ ತತ್ತ್ವವನ್ನು ಸಿದ್ಧರಾಮರು ಯುಕ್ತಿಯುಕ್ತವಾಗಿ ನಾನಾರೀತಿಯಿಂದ ನಿರೂಪಿಸಿದರು! ಆದರೂ, ಶರಣರು ಒಡಂಬಡಲಿಲ್ಲ. ಸಿದ್ಧರಾಮಯ್ಯ ಮಹಾಜ್ಞಾನಿ! ಶಿವತತ್ತ್ವನಿಷ್ಠ; ಶಿವಯೋಗನಿರತ; ಅಪರೋಕ್ಷಜ್ಞಾನಿ! ಆದ್ದರಿಂದಲೇ ಅವರು ಎಲ್ಲ ಶರಣರಿಗೂ ತಮ್ಮ ಸಿದ್ಧಿಯನ್ನು ತಿಳಿಸಿ, ತಮಗೆ ಇಷ್ಟಲಿಂಗವಿರ

ಬೇಕಾದ್ದಿಲ್ಲವೆಂಬುದನ್ನು ಸಾಧಿಸಿದರು. "ಪರಶಿವತತ್ತ್ವವನ್ನು ಬಲ್ಲ ಶರಣನಿಗೆ ಶಿವಪೂಜೆಯ ದಂದುಗವೇಕೆ? ಒಲುಮೆಯ ಕೂಟಕ್ಕೆ ಹಾಸುಗೆಯ ಹಂಗೇಕೆ? ಅಪರಂಜಿಗೆ ಒರೆಗಲ್ಲಿನ ಹಂಗೇಕೆ? ಆಕಾಶವನ್ನು ಅಡರಬಲ್ಲ ಸಮರ್ಥನಿಗೆ ಏಣಿಯ ನೆರವೇಕೆ? ಸಮುದ್ರವನ್ನು ಹಾರಬಲ್ಲವನಿಗೆ ಹರಿಗೋಲ ಚಿಂತೆಯೇಕೆ? ಶಿವಸ್ವರೂಪಿಯೇ ತಾನಾಗಿರುವ ಸಿದ್ಧರಾಮಯ್ಯನವರಿಗೆ ಇಷ್ಟಲಿಂಗದ ಗೋಜೇಕೆ?" ಎಂದು ಅಲ್ಲಮರೂ ಸಿದ್ಧರಾಮರ ವಾದವನ್ನೇ ಸಮರ್ಥಿಸಿದರು! ಶರಣರೆಲ್ಲಾ ನಿಸ್ಸಹಾಯಕರಾದಂತೆ ಕಂಡರು!

ಆಗ ಚನ್ನಬಸವಣ್ಣನವರು–ಆಕಾಶದಲ್ಲಿ ಆಡುವ ಪಟಕ್ಕಾದರೂ ಮೂಲಸೂತ್ರವಿರಬೇಕು; ವೀರನಾದರೂ ಕಾರ್ಯದಕ್ಷತೆಯಿರಬೇಕು; ಭೂಮಿ ಇಲ್ಲದೆ ಬಂಡಿ ನಡೆಯಬಲ್ಲುದೆ? ಅಂಗಕ್ಕೆ ಲಿಂಗ ಸಂಗವಿಲ್ಲದೆ ನಿಸ್ಸಂಗವಾಗಲಾರದು. ಆಕಾಶದಲ್ಲಿ ಸಂಚರಿಸುವ ಸೂರ್ಯ ಚಂದ್ರರಿಗೂ ಹೇಮಗಿರಿಯ ಸಂಚ ತಪ್ಪದು! ಭೂಮಿಯನ್ನು ಬಿಟ್ಟು ಗಗನಕ್ಕೆ ಹಾರಿದವನಿಗೆ ಆ ಗಗನದಲ್ಲಿ ನಿಲ್ಲುವುದಕ್ಕೆ ಒಂದು ಸ್ಥಳವಿದೆಯೆ? ಅಂಗದಮೇಲೆ ಆಯತವಾದುದೇ ಇಷ್ಟಲಿಂಗ. ಆ ಇಷ್ಟಲಿಂಗದಿಂದಲೇ ಪ್ರಾಣಲಿಂಗ ಪರಿಜ್ಞಾನ. ತಿಳಿದುಪ್ಪ ಮತ್ತು ಗಟ್ಟಿತುಪ್ಪಕ್ಕೆ ಭೇದವಿದೆಯೆ? ದೀಪಕ್ಕೂ ದೀಪ್ತಿಗೂ ಭಿನ್ನವಿದೆಯೆ? ಆತ್ಮಕ್ಕೂ ದೇಹಕ್ಕೂ ಸಂದು ಉಂಟೆ? ಹಾಲಿಗೂ ಅದರ ರುಚಿಗೂ ಭೇದವಿದೆಯೆ? ಆದ್ದರಿಂದ ಸಾಕಾರವನ್ನೇ ನಿರಾಕಾರವೆಂದು ತಿಳಿದು ಅಂಗ ಲಿಂಗ ಸಂಬಂಧವಿಲ್ಲದವರ ಸಂಗವನ್ನು ಶರಣರು ಮೆಚ್ಚಲಾರರು–ಎಂದು ಸ್ಪಷ್ಟವಾಗಿ ಲಿಂಗತತ್ತ್ವವನ್ನು ನಿರೂಪಿಸಿದರು. ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯದಲ್ಲಿ ಇಷ್ಟ ಪ್ರಾಣ ಭಾವ

ವೆಂಬ ಲಿಂಗತ್ರಯ ಸಂಬಂಧವಿರಬೇಕೆಂಬ ಚನ್ನಬಸವಣ್ಣನವರ ಸಿದ್ಧಾಂತವನ್ನು ಎಲ್ಲ ಶರಣರೂ ಅಂಗೀಕರಿಸಿದರು. ಗುಹೇಶ್ವರ ಲಿಂಗದಲ್ಲಿ ಇಷ್ಟಲಿಂಗ ಸಂಬಂಧಿಯಾದಲ್ಲದೆ ಪ್ರಾಣಲಿಂಗ ಸಂಬಂಧ ವಾಗಲಾರದೆಂದು ಅಲ್ಲಮರೂ ಒಪ್ಪಿದರು. "ಶುದ್ಧವನರಿದೆ ಚನ್ನಬಸವಣ್ಣಾ, ನಿಮ್ಮಿಂದ. ಸಿದ್ಧವನರಿದೆ ಚನ್ನಬಸವಣ್ಣಾ, ನಿಮ್ಮಿಂದ. ಪ್ರಸಿದ್ಧವನರಿದೆ ಚನ್ನಬಸವಣ್ಣಾ, ನಿಮ್ಮಿಂದ. ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ಚನ್ನಬಸವಣ್ಣ ಗುರುವಾಗಿ ಬಂದು ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯಾ"– ಎಂದು ಸಿದ್ಧರಾಮರು ಚನ್ನಬಸವಣ್ಣನವರ ಶ್ರೀಪಾದಕ್ಕೆ ನಮೋ ನಮೋ ಎಂದು ಸಾಷ್ಟಾಂಗಪ್ರಣಾಮ ಮಾಡಿದರು. ಚನ್ನ ಬಸವಣ್ಣನವರಿಂದ ಅನುಭವಮಂಟಪದಲ್ಲಿ ಪಂಚಕಲಶ ಸ್ಥಾಪನಾ ಪೂರ್ವಕವಾಗಿ ಸಿದ್ಧರಾಮರಿಗೆ ಸಕಲ ಶರಣಗಣಸಾಕ್ಷಿಯಾಗಿ ಇಷ್ಟಲಿಂಗ ಪ್ರದಾನವಾಯಿತು. ವೀರಶೈವ ದೀಕ್ಷೆಯಿಂದ ಸಿದ್ಧ ರಾಮರು ಕೃತಾರ್ಥರಾದರು. ಈ ಪ್ರಸಂಗ ಚನ್ನಬಸವಣ್ಣನವರ ಉಚ್ಚಮಟ್ಟದ ಶಾಸ್ತ್ರಾನುಭವವನ್ನು ವ್ಯಕ್ತಗೊಳಿಸುತ್ತದೆ. ಅಲ್ಲಮಪ್ರಭು, ಚನ್ನಬಸವಣ್ಣನವರ ಪೂರ್ಣಪ್ರಜ್ಞಾಶಕ್ತಿಯನ್ನು ಅರಿತು "ಕಿರಿಯದಾದರೇನು? ಹಿರಿಯದಾದಡೇನು? ಅರಿವಿಂಗೆ ಹಿರಿದು ಕಿರಿದುಂಟೆ? ಆದಿಯನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡ ಕೋಟಿಗಳು ದಯವಾಗದಂದು, ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ ಎಂಬುದು ಕಾಣಬಂದಿತ್ತು ಕಾಣಾ, ಚನ್ನಬಸವಣ್ಣಾ!" ಎಂದು ತಮ್ಮ ಮೆಚ್ಚುಗೆಯನ್ನು ತಿಳಿಸಿದರು.

ಬಸವಣ್ಣನವರು ಅಲ್ಲಮರನ್ನು ತಮ್ಮ ಮಠಕ್ಕೆ ಕರೆದುಕೊಂಡು ಹೋದರು. ಮಹಾಮನೆಯಲ್ಲಿ ಅಲ್ಲಮರನ್ನು ಪರುಷದ

ಸಿಂಹಾಸನದ ಮೇಲೆ ಕೂಡಿಸಿ ಪರಮಾನಂದ ಜಲದಿಂದ ಪಾದಾರ್ಚನೆಯನ್ನು ಮಾಡಿದರು. ಶರಣರು ತಮ್ಮ ಹೃದಯ ಕಮಲ ಪುಷ್ಪದಿಂದ ಆ ಜಂಗಮಮೂರ್ತಿಯನ್ನು ಪೂಜಿಸಿ, ಭಕ್ತಿ ಸಾಮ್ರಾಜ್ಯವೆಂಬ ನೈವೇದ್ಯವನ್ನು ಸಮರ್ಪಿಸಿ ಆನಂದ ಪರವಶ ರಾದರು. ಅವರು ಕೆಲವು ಕಾಲ ಅಲ್ಲಿ ಶಿವಾನುಭವ ಸಂಗೋಷ್ಠಿ ಯಲ್ಲಿ ಶರಣರಿಗೆ ಧರ್ಮತತ್ತ್ವಗಳನ್ನು ವಿವರಿಸುತ್ತ ಶಿವಧರ್ಮ ವನ್ನು ಬೆಳಗಿದರು. ಪ್ರಭುದೇವ, ಬಸವಣ್ಣ, ಸಿದ್ಧರಾಮ, ಅಕ್ಕ ಮಹಾದೇವಿ, ಮಡಿವಾಳಮಾಚಯ್ಯ, ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣ, ಪಡಿಹಾರ ಉತ್ತಣ್ಣ, ಅಕ್ಕ ನಾಗಲಾಂಬಿಕೆ, ಗಂಗಾಂಬಿಕೆ, ನೀಲಾಂಬಿಕೆ, ಮೋಳಿಗೆಯ ಮಾರಯ್ಯ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ ಮುಂತಾದ ಶಿವಶರಣರಲ್ಲಿ ಚನ್ನಬಸವಣ್ಣನವರು ಜ್ಞಾನಭಾಸ್ಕರನಂತಿದ್ದರು. ಅನುಭವ ಮಂಟಪದ ಜ್ಞಾನ ಜ್ಯೋತಿ ನಾಡಿನ ಹೃದಯದಲ್ಲಿ ಬೆಳಗಿತು. ಕಲ್ಯಾಣ ಧರೆಯು ಕೈಲಾಸವಾಯಿತು. ಶರಣರ ಧರ್ಮಸಂದೇಹಗಳನ್ನು ಅಲ್ಲಮ ಪ್ರಭು ತಮ್ಮ ಆತ್ಮಾನುಭವ ಶಕ್ತಿಯಿಂದ ಪರಿಹರಿಸುತ್ತಿದ್ದರು. ಇಂಥ ಸನ್ನಿವೇಶಗಳಲ್ಲಿ ಚನ್ನಬಸವಣ್ಣನವರ ವ್ಯಕ್ತಿತ್ವ ಎದ್ದು ಕಾಣುತ್ತಿತ್ತು!

ಕಲ್ಯಾಣದ ಶರಣ ವೃಂದದಲ್ಲಿ ನುಲಿಯಚಂದಯ್ಯ ಪರಮ ಶರಣ. ಅವನು ಸೊಸೆಯ ಹುಲ್ಲಿನಿಂದ ಹಗ್ಗಗಳನ್ನು ಹೊಸೆದು, ಅವುಗಳನ್ನು ಮಾರಿ, ಬಂದ ಹಣದಿಂದ ಜಂಗಮದಾಸೋಹ ಮಾಡಿ, ತಾನೂ ತನ್ನ ಸಂಸಾರವೂ ಜಂಗಮಪ್ರಸಾದದಿಂದ ತೃಪ್ತರಾಗುತ್ತಿದ್ದರು. ಒಂದು ದಿನ ಅವನು ಎಂದಿನಂತೆ ಹುಲ್ಲನ್ನು ಕೊಯ್ದು ಹೊರೆಯನ್ನು ಕಟ್ಟುವ ಕಾಲದಲ್ಲಿ, ಅವನ

ಇಷ್ಟಲಿಂಗ ಆಕಸ್ಮಾತ್ ಜಾರಿ ನೀರಿನಲ್ಲಿ ಬಿತ್ತು. ಚಂಡಯ್ಯ ಅದನ್ನು ಹುಡುಕಿ ತರಲು ಸಮಯವಿರಲಿಲ್ಲ. ಆಗ ಜಂಗಮ ದಾಸೋಹ ಸಮಯವಾದ್ದರಿಂದ, ಆ ಜಂಗಮವೇ ಲಿಂಗವೆಂಬ ಭಾವನೆಯಿಂದ, ಹೊರೆಯನ್ನು ಹೊತ್ತುಕೊಂಡು ನಡೆದುಬಿಟ್ಟನು. ಆ ಇಷ್ಟಲಿಂಗ ಪುರುಷಾಕಾರದಿಂದ ಎದ್ದು ಬಂದು, ಚಂಡಯ್ಯನ ಹಿಂದೆಯೇ ಓಡುತ್ತ ಅವನನ್ನೇ ಅನುಸರಿಸಿದನು. ಭಕ್ತ ಚಂಡಯ್ಯ ಆ ಲಿಂಗಯ್ಯನನ್ನು ನಿರಾಕರಿಸಿದರು. ಲಿಂಗಯ್ಯ ಚಂಡಯ್ಯನ ಬೆನ್ನ ಹಿಂದೆಯೇ ಬಂದನು. ದಾರಿಯಲ್ಲಿ ಮಡಿವಾಳ ಮಾಚಯ್ಯ ಎದುರಾದನು. ಅವನು ಆ ಲಿಂಗ–ಭಕ್ತರ ಮನಃ ಕಷಾಯ ಪ್ರಸಂಗವನ್ನು ಅರಿತು, ಚಂಡಯ್ಯನನ್ನು ಸಮಾಧಾನ ಪಡಿಸಿ ಲಿಂಗಯ್ಯನನ್ನು ಮನ್ನಿಸಬೇಕೆಂದು ಹೇಳಿದನು. ಚಂಡಯ್ಯ ಈ ಪ್ರಸಂಗವನ್ನು ಶರಣಸಂಗೋಷ್ಠಿಯಲ್ಲಿ ನಿರ್ಣಯಮಾಡ ಬೇಕೆಂದನು. ಅಂದಿನ ಶರಣರ ಶಿವಾನುಭವ ಗೋಷ್ಠಿಯಲ್ಲಿ ಈ ತತ್ವಜಿಜ್ಞಾಸೆ ನಡೆಯಿತು. ಇಷ್ಟಲಿಂಗವೇನಾದರೂ ಕಳೆದು ಹೋದರೆ ಶರಣ ತನ್ನ ಹರಣವನ್ನು ನೀಗಬೇಕೆಂಬುದು ಶರಣ ಸಂಪ್ರದಾಯ. ಲಿಂಗವನ್ನು ತ್ಯಜಿಸಿದರೆ ಶರಣನಿಗೆ ಸದ್ಗತಿ ಯಿಲ್ಲವೆಂಬ ನಂಬುಗೆಯೂ ಆಚರಣೆಯಲ್ಲಿತ್ತು. ಅಲ್ಲಮರ ಸಮಕ್ಷದಲ್ಲಿ ಈ ಪ್ರಸಂಗವನ್ನು ಕುರಿತು ಅನೇಕ ಶರಣರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೂ, ನಿರ್ಣಯಾತ್ಮಕವಾಗಿ ಈ ಜಿಜ್ಞಾಸೆಯನ್ನು ಬಗೆಹರಿಸಲು ಚನ್ನಬಸವಣ್ಣನವರೇ ಸಮರ್ಥ ರೆಂದು ಅಲ್ಲಮರು ತಿಳಿಸಿದರು.

ಆಗ ಚನ್ನಬಸವಣ್ಣನವರು: "ಶ್ರೀ ಗುರು ಕರುಣವೇ ಲಿಂಗ. ಲಿಂಗದ ನಿಜವೇ ಜಂಗಮ. ಇದು ಬಹಿರಂಗ ಸಂಬಂಧ. ಇನ್ನು ಅಂತರಂಗ ಸಂಬಂಧವೆಂದರೆ, ಸುಜ್ಞಾನವೇ ಜಂಗಮ;

ಸತ್ಕ್ರಿಯೆಯೇ ಲಿಂಗ. ಆ ಉಭಯದ ಏಕ ಸಿದ್ಧಿಯೇ ಗುರು. ಆದ್ದರಿಂದ ಅಂಗತ್ರಯದಲ್ಲಿ ಲಿಂಗತ್ರಯವಾದರೇನೇ ಜಂಗಮ ದಾಸೋಹ. ಜಂಗಮ ದಾಸೋಹವಿಲ್ಲದಿದ್ದರೆ ಲಿಂಗ ತೃಪ್ತಿಯಿಲ್ಲ. ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಜಂಗಮಪೂಜೆ ಸಿದ್ಧಿಸುವುದಿಲ್ಲ. ಅಂಗಲಿಂಗ ಸಂಬಂಧವಿದ್ದರೆ ಮಾತ್ರವೇ ಶಿವಪಥ. ಒಂದನ್ನು ಬಿಟ್ಟು ಇನ್ನೊಂದು ನಿರರ್ಥಕ. ಯಾವುದು ಒಂದೇ ಇದ್ದರೂ, ಅದು ಅಂಗವಿಲ್ಲದ ಆತ್ಮನಂತೆ! ಶಕ್ತಿಯಿಲ್ಲದ ಶಿವನಂತೆ! ದೀಪವಿಲ್ಲದ ಪ್ರಕಾಶದಂತೆ; ಒಂದಂಗ ಶೂನ್ಯವಾದರೆ ಭಕ್ತಿಯುಂಟೆ? ಅಂಗಹೀನನು ರಾಯಪಟ್ಟಕ್ಕೆ ಯೋಗ್ಯನೇ? ಲಿಂಗಹೀನನು ಭಕ್ತ್ಯಾಚಾರಕ್ಕೆ ಅರ್ಹನಾಗಬಲ್ಲನೆ? ಮಣ್ಣಿಲ್ಲದೆ ಮರವುಂಟೆ? ಮರವಿಲ್ಲದೆ ಹಣ್ಣುಂಟೆ? ಹಣ್ಣಿಲ್ಲದೆ ರುಚಿಯುಂಟೆ? ಅಂಗವೇ ಮಣ್ಣು; ಲಿಂಗವೇ ಮರ; ಫಲವೇ ಜಂಗಮ! ರುಚಿಯೇ ಪ್ರಸಾದ! ಆದಕಾರಣ ಇಷ್ಟಲಿಂಗ ಸದಾ ಅಂಗದ ಸಂಬಂಧದಲ್ಲಿರಬೇಕು. ಇಷ್ಟಲಿಂಗ ಕಳೆದುಹೋದರೆ ಭಕ್ತ ಪ್ರಾಣತ್ಯಾಗ ಮಾಡಲಾಗದು. ಶ್ರೀ ಗುರುವಿನ ಕಾರುಣ್ಯದಿಂದ ಸಂಸ್ಕಾರ ಹೊಂದಿ, ಮತ್ತೆ ಇಷ್ಟಲಿಂಗವನ್ನು ಪಡೆಯಬಹುದು. ಲಿಂಗಾಂಗ ಸಾಮರಸ್ಯವೇ ಮೋಕ್ಷ,'' ಎಂದು ನಿರ್ಣಯಮಾಡಿದರು. ಚನ್ನಬಸವಣ್ಣನವರ ಪ್ರಸಾದ ನಿರ್ಣಯವನ್ನು ಅಲ್ಲಮರೂ ಒಪ್ಪಿದರು. ಎಲ್ಲ ಶರಣರೂ ಅನುಮೋದಿಸಿದರು. ಚಂದಯ್ಯನು ಆ ನಿರೂಪವನ್ನು ಒಪ್ಪಿ, ತನ್ನ ಇಷ್ಟಲಿಂಗವನ್ನು ಧರಿಸಿಕೊಂಡು "ಎನ್ನ ಅಂಗದ ಸತ್ಕ್ರಿಯೆಯೇ ಬಸವಣ್ಣ; ಎನ್ನ ಲಿಂಗದ ಸತ್ಕ್ರಿಯೆಯೇ ಚನ್ನಬಸವಣ್ಣ; ಎನ್ನ ಅರಿವಿನ ಸತ್ಕ್ರಿಯೆಯೇ ಅಲ್ಲಮಪ್ರಭು; ಚನ್ನಬಸವಣ್ಣನವರಿಂದ ನನಗೆ ಸಮ್ಯಕ್‌ಜ್ಞಾನ ವಾಯಿತು.'' ಎಂದು ಲಿಂಗಾನಂದದಲ್ಲಿ ಲೀನನಾದನು!

ಅನುಭವಮಂಟಪದಲ್ಲಿ ಚನ್ನಬಸವಣ್ಣನವರ ಪ್ರಭಾವ ಅಸಾಧಾರಣವಾಗಿತ್ತು. ಅವರು ಅತೀವ ಸೂಕ್ಷ್ಮಮತಿ. ಎಂಥ ವಿಷಮ ಸನ್ನಿವೇಶದಲ್ಲಿಯೇ ಆಗಲಿ ಅವರು ಯುಕ್ತ ಪರಿಹಾರ ವನ್ನು ಸೂಚಿಸಿ, ಆ ಇಕ್ಕಟ್ಟಿನಿಂದ ಹಿರಿಯರನ್ನೂ ಪಾರುಮಾಡು ತ್ತಿದ್ದರು. ಎಂಥ ಕಠಿಣ ಪ್ರಸಂಗವನ್ನಾದರೂ ಸ್ಥಿರಚಿತ್ತದಿಂದ ಸುಮುಖವಾಗಿ ಪರಿಹರಿಸುತ್ತಿದ್ದರು. ಶಿವಾನುಭವಮಂಟಪ, ಪ್ರಮಥರ ಕ್ಷೇತ್ರದಂತಿತ್ತು. ಆ ಪ್ರಮಥರ ತತ್ವಾರ್ಥ ಭಾಗೀರಥಿ ಜನಮನವನ್ನು ತಣಿಸಿತು. ಆ ಪಾವನ ಕ್ಷೇತ್ರದತ್ತ ಪರಮಾರ್ಥಸಾಧಕರು ದಿನದಿನವೂ ಬರುತ್ತಿದ್ದರು. ಬಸವಣ್ಣ ನವರ ಮಹಾಮನೆಯಲ್ಲಿ ಒಂದುಲಕ್ಷ ತೊಂಭತ್ತಾರು ಸಾವಿರ ಜಂಗಮರಿಗೆ ನಿತ್ಯ ದಾಸೋಹ ನಡೆಯುತ್ತಿತ್ತು. ಅವರಲ್ಲಿ ಕಿರಿಯರೂ ಹಿರಿಯರೂ ಸಾಧಕರೂ ಸಿದ್ಧರೂ, ಅನುಭಾವಿಗಳೂ, ಅನನುಭಾವಿಗಳೂ ಇದ್ದರು. ಅವರು ಲೋಕವ್ಯವಹಾರ ನಿರ್ಲಿಪ್ತರಾಗಿದ್ದರು. ಅವರಲ್ಲಿ ಇನ್ನೂ ಅನೇಕರ ಹೃದಯ ಪರಿ ಪಕ್ವವಾಗಿರಲಿಲ್ಲ. ಅವರಲ್ಲಿ ವಿಷಯರಹಿತರಿದ್ದಂತೆಯೇ ವಿಷಯಾ ಸಕ್ತರೂ ಇದ್ದರೇನೋ! ಆ ಅನುಭವಮಂಟಪದ ಶರಣವೃಂದ ದಲ್ಲಿ ಬಸವಣ್ಣನವರನ್ನು ಸಂದರ್ಶಿಸಲು ಉಡುತಡಿಯ ಅಕ್ಕಮಹಾ ದೇವಿ ಬರುತ್ತಿದ್ದಳು. ಆಕೆ ಉಡುತಡಿಯಲ್ಲಿ ಶಿವಾಚಾರದ ಗುಡು ಸ್ಥಲ ಕುಟುಂಬದಲ್ಲಿ ಜನಿಸಿ, ಬಾಲ್ಯದಿಂದಲೂ ಶ್ರೀ ಚನ್ನಮಲ್ಲಿ ಕಾರ್ಜುನನನ್ನು ಆರಾಧಿಸುತ್ತಿದ್ದಳು. ಆಕೆ ಪರಮ ರೂಪವಂತೆ; ಷೋಡಶಿ. ಆ ನಾಡಿನ ರಾಜ ಕೌಶಿಕ ಆಕೆಯನ್ನು ಮೋಹಿಸಿ ಮದುವೆಯಾಗಲು ಬಯಸಿದನು. ಅವನು ಭವಿ. ಆಕೆ ವೀರ ವಿರಾಗಿಣಿ. ಅವನನ್ನು ಅವಳು ನಿರಾಕರಿಸಿ ಕಲ್ಯಾಣದ ಕಡೆಗೆ ಬಂದಳು. ಆ ವರ್ತಮಾನವನ್ನು ತಿಳಿದು ಬಸವಣ್ಣನವರು

ಆನಂದಪರವಶರಾದರು. ಕಿನ್ನರಯ್ಯ ಅವಳನ್ನು ಕಲ್ಯಾಣದ ಹೊರಬಯಲಿನಲ್ಲಿಯೇ ಸ್ವಾಗತಿಸಿದನು. ಅವಳು ಆ ಪೂರ್ಣ ಪ್ರಾಯದಲ್ಲಿ ದಿಗಂಬರಳಾಗಿ ಬರುತ್ತಿದ್ದಳು. ಅವಳ ನೀಳ ಕೇಶರಾಶಿಯೇ ಅವಳ ಮೈಯನ್ನು ಮುಚ್ಚಿತ್ತು! ಕಿನ್ನರಯ್ಯ ಮಹಾಶರಣ. ಅವಳನ್ನು ಕಂಡು ಮೋಹಿತನಾದನು! ಆಗ ಅವಳು—"ಎನ್ನಂತೆ ಪುಣ್ಯಂಗೆಯ್ದುವರುಂಟೆ? ಎನ್ನಂತೆ ಭಾಗ್ಯಂಗೆಯ್ದುವರುಂಟೆ? ಕಿನ್ನರಯ್ಯನಂತಪ್ಪ ಸೋದರನೆನಗೆ. ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಂಧುಗಳೆನಗೆ. ಚನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ, ಎನಗೆ!"—ಎಂದು ಅವನಿಗೆ ತನ್ನ ವೈರಾಗ್ಯ ಜೀವನ ಪರಿಚಯವನ್ನು ತಿಳಿಸಿದಳು. ಕಿನ್ನರನು ಖಿನ್ನನಾದನು. ಅಕ್ಕಮಹಾದೇವಿ ಶಿವಾನುಭವಮಂಟಪದಲ್ಲಿ ಶಿವ ಶರಣ ಗಡಣದಲ್ಲಿ ಅಲ್ಲಮರನ್ನೂ ಬಸವಣ್ಣನವರನ್ನೂ ಸಂದರ್ಶಿಸಿದಾಗ, ಎಲ್ಲ ಶರಣ ಶರಣೆಯರೂ ದಿಗ್ಭ್ರಾಂತರಾದರು! ಆಗ ಬಸವಣ್ಣನವರು–"ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯಾ, ಪ್ರಭುವೆ"–ಎಂದು ಹೇಳಿ, ಅಕ್ಕನತ್ತ ನೋಡಿದರು. ಅವಳು ಎಲ್ಲ ಶರಣರಿಗೆ ಶರಣಾರ್ಥಿ ಎಂದು ಕೈ ಮುಗಿದು, ಅಲ್ಲಮರನ್ನು ಕಂಡು ನಮೋ ನಮೋ ಎಂದಳು. ಆಗ ಪ್ರಭು ಅವಳನ್ನು ಕಂಡು–ಅವ್ವಾ! ನೀನು ನವಯೌವನವತಿ. ನೀನು ಇಲ್ಲಿಗೇಕೆ ಬಂದೆ? ಹೆಣ್ಣೆಂದರೆ ನಮ್ಮ ಶರಣರು ಮುನಿಯುತ್ತಾರೆ. ನಿನ್ನ ಪತಿಯ ಕುರುಹು ಹೇಳಿದರೆ ಇಲ್ಲಿ ಬಂದು ಕುಳ್ಳಿರು. ಇಲ್ಲವಾದರೆ, ಇಲ್ಲಿಂದ ಹೊರಟುಹೋಗು. ಸತಿಯರ ಗೋಷ್ಠಿ ಪಿಸದಂತೆ! ಶರಣರ ಸಮುಖದಲ್ಲಿ ಗಂಡನಿಲ್ಲದ ಹೆಣ್ಣು ಇರಬಾರದು–ಎಂದು ಪರೀಕ್ಷಿಸಿದನು.

ಆಗ ಅಕ್ಕಮಹಾದೇವಿ ತನ್ನ ಗಂಡ ಚನ್ನಮಲ್ಲಿಕಾರ್ಜುನ

ನೆಂದೂ ಗುರುವೇ ತೆತ್ತಿಗ; ಲಿಂಗವೇ ಮದುವಳಿಗ; ತಾನೇ ಮದುವಳಿಗಿತ್ತಿ ಎಂದೂ 'ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ' ಎಂದೂ—ತನ್ನ ದಾಂಪತ್ಯ ಜೀವನದ ರೀತಿಯನ್ನು ತಿಳಿಸಿದಳು. ಅಲ್ಲಮಪ್ರಭು ಆಕೆಯನ್ನು ನಾನಾ ರೀತಿಯಾಗಿ ಪ್ರಶ್ನೆ ಮಾಡಿದನು. ಅವರ ಎಲ್ಲ ತತ್ವ ಜಿಜ್ಞಾಸೆಗಳಿಗೂ ಅವಳು ತತ್ವಾರ್ಥ ಪೂರ್ಣ ಸಮಾಧಾನವನ್ನೇ ಹೇಳಿದಳು. ಬಸವಣ್ಣನವರ ಸಂಶಯವೂ ನಿವಾರಣೆಯಾಯಿತೇನೋ! ಆದರೆ, ಚನ್ನಬಸವಣ್ಣನವರು ಮಾತ್ರ ಆ ವೈರಾಗ್ಯಸಿದ್ಧಿಯನ್ನು ಅರಿಯಲು ಶಕ್ತರಾದರು! ಅವಳಲ್ಲಿ ಶಿವಾದ್ವೈತ ಭಾವ ಮೂರ್ತಿವೆತ್ತಂತಿತ್ತು! ಅಂಥ ಅದ್ವೈತಜ್ಞಾನ ಲಭಿಸಬೇಕಾದರೆ ಕೋಟ್ಯಾಂತರ ವರ್ಷ ಕಾಲ ತಪಸ್ಸು ಮಾಡಿದ ಮುನಿಗಳುಂಟು! ಜೀವಮಾನಪರ್ಯಂತ ಯೋಗ ಸಾಧನೆಯಲ್ಲಿ ನಿರತರಾದವರುಂಟು! ಅವರ ಸುತ್ತಲೂ ಹುತ್ತ ಬೆಳೆದುದುಂಟು; ಬೆತ್ತ ಬೆಳೆದುದುಂಟು. ಆದರೂ, ಅವರಿಗೆ ಕೈವಲ್ಯ ಸಿದ್ಧಿಯಾಯಿತೋ ಇಲ್ಲವೋ! ಆದರೆ, ಅಕ್ಕ ಆ ಚಿಕ್ಕ ವಯಸ್ಸಿನಲ್ಲಿಯೇ ಸಿದ್ಧಿಯನ್ನು ಪಡೆದಿದ್ದಳೆಂಬುದನ್ನು ಚಿಕ್ಕ ವಯಸ್ಸಿನ ಚನ್ನಬಸವಣ್ಣನವರು ಅರಿತರು! ಹಿರಿಯರು ಕಿರಿಯರ ಮನಸ್ಸನ್ನು ಅರಿಯಲಾರರೇನೋ! ಕಿರಿಯರು ಕಿರಿಯರನ್ನು ಆತ್ಮೀಯತೆಯಿಂದ ಅರಿಯಬಲ್ಲರು! ಸಮ್ಯಕ್ ಜ್ಞಾನಿ ಚನ್ನಬಸವಣ್ಣನವರು ಆಕೆಯ ಶಿವಯೋಗಶಕ್ತಿಯನ್ನು ಗ್ರಹಿಸಿದರು; ಮಹಾತ್ಮ್ಯೆಯನ್ನು ತಿಳಿದರು; ತಪೋಸ್ಪದವನ್ನು ಪರಿಭಾವಿಸಿದರು; ವೀರ ವೈರಾಗ್ಯಸ್ಥಿತಿಯನ್ನು ಮೆಚ್ಚಿದರು! "ಅಜ ಕಲ್ಪಕೋಟಿ ವರುಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ನಡು ಮುರಿದು ಗುಡುಗೂರಿ ತಲೆ ನಡುಗಿ ನೆರೆ

ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೇ? ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು"–ಎಂದು ಅಕ್ಕನ ಹಿರಿಯತನವನ್ನು ಚನ್ನಬಸವಣ್ಣನವರು ಕೊಂಡಾಡಿದರು. ಶರಣರ ನಡೆ ನುಡಿಯನ್ನು ಕಂಡು ಅವರ ಯೋಗ್ಯತಾ ಸಿದ್ಧಿಯನ್ನು ನಿರ್ಣಯಿಸಬಲ್ಲ ಸೂಕ್ಷ್ಮಬುದ್ಧಿ ಚನ್ನಬಸವಣ್ಣನವರಲ್ಲಿತ್ತು! ಆಕೆ ಅನುಭವಮಂಟಪದಲ್ಲಿ ತತ್ವ ಪ್ರಾಜ್ಞರಾದ ಅಲ್ಲಮರೊಂದಿಗೆ ಮಾಡಿದ ತತ್ವಾರ್ಥ ಮಥನದಿಂದ ಚನ್ನಬಸವಣ್ಣನವರು ಆಕೆಯ ವ್ಯಕ್ತಿ ವೈಭವವನ್ನು ಮನೋಜ್ಞವಾಗಿ ತಿಳಿಸಿದರು. ಆಕೆಯ ವಚನಶ್ರೀಯನ್ನು ಹೃದಯಪೂರ್ವಕವಾಗಿ ರೂಪಿಸಿದರು! ಅವರು ಎಲ್ಲ ಶಿವಶರಣರ ವಚನವೈಖರಿಯನ್ನೂ ಬಲ್ಲವರಾಗಿದ್ದರು. ಆದುದರಿಂದಲೇ

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣ ಸಿದ್ಧರಾಮಯ್ಯಾ"

—ಎಂದು ಚನ್ನಬಸವಣ್ಣನವರು ವಚನವಾಙ್ಮಯವನ್ನು ವಿಮರ್ಶೆ ಮಾಡಿರುತ್ತಾರೆ. ಅಲ್ಲದೆ, ಬಸವಣ್ಣ, ಅಲ್ಲಮ, ಅಜಗಣ್ಣ—ಮೊದಲಾದ ಎಲ್ಲ ಹಿರಿಯರ ವಚನಗಳಿಗೆ ಹೋಲಿಸಿ, ಮುಚ್ಚುಮರೆಯಿಲ್ಲದೆ, ಸ್ಥಾನ ದಾಕ್ಷಿಣ್ಯವಿಲ್ಲದೆ ಅಕ್ಕನ ಸಾಹಿತ್ಯ ಶಕ್ತಿಯನ್ನು ಮನನಾರೆ ಕೊಂಡಾಡಿದರು. ಇದು ಅವರ ಭಾವೌನ್ನತ್ಯವನ್ನು ವ್ಯಕ್ತಪಡಿಸುತ್ತವೆ: ಅಕ್ಕಮಹಾದೇವಿ

ಕೆಲವು ಕಾಲ ಕಲ್ಯಾಣದಲ್ಲಿದ್ದು, ಅಲ್ಲಮರ ಅನುಗ್ರಹವನ್ನು ಪಡೆದು, ಎಲ್ಲ ಶರಣರನ್ನೂ ಬೀಳ್ಕೊಂಡು ಶ್ರೀಶೈಲದತ್ತ ನಡೆದಳು.

೬

ಬಸವಣ್ಣನವರ ಕಾಲದಲ್ಲಿ ಕರ್ನಾಟಕದ ಸಮಾಜಜೀವನ ವೈವಿಧ್ಯಮಯವಾಗಿತ್ತು ; ರಾಜಕೀಯ ಪರಿಸ್ಥಿತಿಯೂ ಪ್ರಶಾಂತ ವಾಗಿರಲಿಲ್ಲ. ಜೈನಧರ್ಮದ ಆಶ್ರಯದಾತರಾಗಿದ್ದ ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಆ ವೇಳೆಗಾಗಲೇ ನಿಸ್ತೇಜರಾಗಿದ್ದರು. ಜೈನಧರ್ಮ ತಬ್ಬಲಿಯಾಗಿತ್ತು. ಆಗ ಶೈವ ಮತ್ತು ವೈಷ್ಣವ ಪಂಥಗಳು ಕನ್ನಡನಾಡಿನಲ್ಲಿ ಪ್ರವರ್ಧ ಮಾನವಾಗುತ್ತಿದ್ದುವು. ಬೌದ್ಧಧರ್ಮ ತನ್ನ ಉತ್ಕರ್ಷೆಯನ್ನು ನೀಗಿಕೊಂಡು ಅವನತಸ್ಥಿತಿಯಲ್ಲಿತ್ತು. ಕ್ರಿ.ಶ. ಎಂಟನೆಯ ಶತಮಾನದಲ್ಲಿ ಶಂಕರಾಚಾರ್ಯರು ಅದ್ವೈತ ಮತವನ್ನು ಭರತ ಖಂಡದಲ್ಲಿ ಸಂಸ್ಥಾಪಿಸಿದರು. ಆ ಮತದ ಪ್ರಾಬಲ್ಯದಿಂದ ಬೌದ್ಧ ಮತ ತತ್ತರಿಸಿಹೋಯಿತು. ಆದರೂ ಅದು ಬಸವಣ್ಣನವರ ಕಾಲದಲ್ಲಿ ಕರ್ನಾಟಕದಲ್ಲಿ ಬೌದ್ಧಧರ್ಮ ಇನ್ನೂ ಅಲ್ಪ ಸ್ವಲ್ಪ ಪ್ರಚಾರದಲ್ಲಿತ್ತು. ಆಗ ಶೈವಧರ್ಮ ವಿಶೇಷ ಪ್ರಬಲವಾಗಿತ್ತು. ಅದರಲ್ಲಿ ಅನೇಕ ಭೇದಗಳಿದ್ದುವು. ಶೈವ, ಪಾಶುಪತ, ಸೋಮ, ಲಾಕುಲ ಎಂಬ ನಾಲ್ಕು ಪ್ರಮುಖ ಶೈವ ಪಂಗಡಗಳಲ್ಲಿ ಭಿನ್ನ ಭಿನ್ನ ಮಾರ್ಗಗಳಿದ್ದುವು. ಕಾಶ್ಮೀರದಿಂದ ಶೈವ ಪಂಗಡ ಕರ್ನಾಟಕಕ್ಕೆ ಬಂತು. ಈ ಕಾಶ್ಮೀರಶೈವರು ವೇದಾಗಮ ಪುರಾಣಗಳಲ್ಲಿ ಅಪ್ರತಿಮ ವಿದ್ವಾಂಸರಾಗಿದ್ದರು. ಅವರು ಮಹಾ ತಪೋನಿಷ್ಠರಾಗಿದ್ದುದರಿಂದ ಜನರು ಅವರನ್ನು ಗೌರವಿಸು

ತ್ತಿದ್ದರು. ಅವರು ರಾಜಾಶ್ರಯದಲ್ಲಿ ಬೃಹನ್ಮಠಗಳನ್ನು ಸ್ಥಾಪಿಸಿ, ಆಚಾರ್ಯರುಗಳಾಗಿಯೂ, ಕುಲಪತಿಗಳಾಗಿಯೂ ಇದ್ದರು. ಅವರು ಬಳ್ಳಿಗಾವಿ, ತರ್ದವಾಡಿ ಮುಂತಾದ ಸ್ಥಳಗಳಲ್ಲಿ ನೆಲೆಸಿದ್ದರು. ಕಾಳಾಮುಖ ಶೈವರು ಬನವಾಸಿ ಪ್ರಾಂತದಲ್ಲಿ ಪ್ರಸಿದ್ಧರಾಗಿದ್ದರು. ಶ್ರೀಶೈಲ, ಬಳ್ಳಿಗಾವಿ, ಅಬ್ಬಲೂರು, ಹಾನಗಲ್ಲು, ಗದಗು, ಹೂಲಿ, ಕೊಪ್ಪಳ, ಸುತ್ತೂರು–ಮುಂತಾದ ಸ್ಥಳಗಳು ಕಾಳಾಮುಖರ ಪ್ರಮುಖ ಕ್ಷೇತ್ರಗಳಾಗಿದ್ದುವು. ಲಕುಲೀಶ ಶೈವ ಬಹಳ ಪ್ರಾಚೀನ ವಾದುದು. ಇದನ್ನು ಪಾಶುಪತವೆಂದೂ ಕರೆಯುತ್ತಾರೆ. ಇವರಲ್ಲಿದ್ದ ಕೆಲವು ವಾಮಾಚಾರಗಳನ್ನು ಜನರು ಒಪ್ಪಲಿಲ್ಲ. ಕಾಪಾಲಿಕ ಶೈವಮತ ಶಿವನ ಭೈರವ ಸ್ವರೂಪವನ್ನು ಆರಾಧಿಸುತ್ತಿತ್ತು. ಇವರು ಸ್ಮಶಾನದಲ್ಲಿ ವಾಸಿಸುತ್ತಿದ್ದರು. ಶಾಕ್ತರೂ ಶಿವನನ್ನು ಆರಾಧಿಸುತ್ತಿದ್ದರು. ಇದನ್ನು ನಾಥಪಂಥವೆಂದೂ ಕರೆಯುತ್ತಿದ್ದರು. ಈ ಎಲ್ಲ ಶೈವ ಪಂಥಗಳಿಗೂ ಶಿವನೇ ಆರಾಧ್ಯದೈವ. ಆದರೆ, ಒಂದೊಂದು ಪಂಥವೂ ಶಿವನನ್ನು ಬೇರೆ ಬೇರೆ ಮಾರ್ಗದಿಂದ ಪೂಜಿಸುತ್ತಿತ್ತು.

ಬಸವಣ್ಣನವರು ಎಲ್ಲ ಶೈವ ಪ್ರಭೇದಗಳನ್ನೂ ತಮ್ಮ ವೀರಶೈವದಲ್ಲಿ ಸಮಾವೇಶಗೊಳಿಸಲೆತ್ನಿಸಿದರು. ಈ ಕಾರ್ಯದಲ್ಲಿ ಚನ್ನಬಸವಣ್ಣನವರು ಅತ್ಯಂತ ಪ್ರಧಾನಪಾತ್ರವನ್ನು ವಹಿಸಿದರು. ವೀರಶೈವದಲ್ಲಿ ಷಟ್ಸ್ಥಲ, ಅಷ್ಟಾವರಣ ಮತ್ತು ಪಂಚಾಚಾರ ತತ್ವಗಳನ್ನು ಅವರು ಅನುಭವಮಂಟಪದಲ್ಲಿ ಪ್ರತಿಪಾದಿಸಿದರು. ಅವರ ಉಪದೇಶ ಬಲದಿಂದ ಅನೇಕ ಶೈವ ಪಂಗಡಗಳು ವೀರಶೈವವನ್ನು ಅಂಗೀಕರಿಸಿದುವು. ಸಮಾಜದಲ್ಲಿ ವಾಮಾಚಾರಗಳು ಮಾಯವಾದುವು. ಜನರು ಸಾತ್ತ್ವಿಕ ಮನೋ

ಭಾವದಿಂದ ಶಿವನನ್ನು ಆರಾಧಿಸಲು ಸಿದ್ಧರಾದರು. ಇಷ್ಟ ಲಿಂಗಧಾರಣೆಯಿಂದ ಶೈವರು ವೀರಶೈವರಾದರು. “ಶೈವ ಸೈವೆಂಗಾದ; ಪಾಶುಪತಿ ಪಥವರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ; ಸಂನ್ಯಾಸಿ ಪಾಷಾಂಡಿಯಾದ, ಕಾಪಾಲಿ ಮರುಳಾಗಿ ತಿರುಗಿದ; ಈ ಆರು ಭಕ್ತಿಪಥಕ್ಕೆ ಸಲ್ಲವು ಕೇಳಿರಣ್ಣಾ”—ಎಂದು ಚನ್ನಬಸವಣ್ಣನವರು ಎಲ್ಲ ಶೈವಗಳನ್ನೂ ನಿರಾಕರಿಸಿ, ಭಕ್ತಿ ಪ್ರಧಾನವಾದ ವೀರಶೈವವನ್ನು ಬೋಧಿಸಿದರು. ಸಮಾಜ ಪರಿಷ್ಕರಣಕಾರ್ಯದಲ್ಲಿ ಅವರು ಬಸವಣ್ಣನವರ ಹೃದಯವಾಣಿಯಾದರು. ದೀನದಲಿತರೂ, ಪತಿತರೂ, ಅಂತ್ಯಜರೂ ವೀರಶೈವವನ್ನು ಅವಲಂಬಿಸಿ ಸಮಾಜದಲ್ಲಿ ಗೌರವ ಪ್ರತಿಷ್ಠೆಗಳನ್ನು ಪಡೆದರು. ಸ್ತ್ರೀಯರೂ ಪುರುಷರಂತೆಯೇ ಷಟ್ಸ್ಥಲ ಸಾಧನೆಯಲ್ಲಿ ನಿರತರಾಗಲು ಅವಕಾಶವಾಯಿತು. ಆ ಕಾಲದಲ್ಲಿ ವೈದಿಕ ಪಂಥಗಳ ಸ್ಥಿತಿಯೂ ತೃಪ್ತಿಕರವಾಗಿರಲಿಲ್ಲ. ಅವು ಜನಸಾಮಾನ್ಯರನ್ನು ದೂರದಲ್ಲಿಟ್ಟು, ದೈವಸಾಕ್ಷಾತ್ಕಾರಕ್ಕೆ ಅಡ್ಡಿ ಅಡಚಣೆಗಳನ್ನು ಕಲ್ಪಿಸಿದ್ದವು. ಅವು ಯಜ್ಞ ಯಾಗ ರೂಪವಾದ ಕರ್ಮಗಳಿಗೆ ವಿಶೇಷ ಮಹತ್ವವನ್ನು ನೀಡಿ, ಸಾಮಾನ್ಯ ಜನಜೀವನವನ್ನು ಪರಿಶುದ್ಧಗೊಳಿಸಲು ಮನಸ್ಸು ಮಾಡಲಿಲ್ಲ. ಅವು ಯಜ್ಞಗಳಲ್ಲಿ ಪಶುಬಲಿಯನ್ನು ನಿರಾತಂಕವಾಗಿ ನಡೆಸುತ್ತಿದ್ದುವು. ವೈದಿಕ ಮತಾನುಯಾಯಿಗಳು ಈ ಕರ್ಮ ನೆಪದಿಂದ ಮಾಂಸ ಭಕ್ಷಣೆ ಮಾಡುತ್ತಿದ್ದುದೂ ಉಂಟು. ಶಿವಶರಣರು ಅಹಿಂಸೆಯೇ ಪರಮಧರ್ಮವೆಂದೂ ದಯೆಯೇ ಧರ್ಮದ ಮೂಲವೆಂದೂ ಸಾರಿದರು. ಬಸವಣ್ಣನವರು ಕೈಗೊಂಡು ನಡೆಸಿದ ಸಮಾಜ ಪರಿಷ್ಕರಣ ಕಾರ್ಯದಲ್ಲಿ ಅಲ್ಲಮರೂ ಚನ್ನಬಸವಣ್ಣನವರೂ ಜ್ಞಾನಕ್ರಿಯೆಗಳಂತೆ ನೆರವಾದರು. ಅಲ್ಲಮರು ಕೆಲವು

ಕಾಲ ಕಲ್ಯಾಣದಲ್ಲಿ ಶರಣ ಸಂಗೋಷ್ಠಿಯಲ್ಲಿದ್ದು ಶರಣರಿಗೆ ಆಧ್ಯಾತ್ಮಿಕ ಸ್ವರೂಪವನ್ನು ತಿಳಿಸಿ, ಅವರು ಪುನಃ ಹನ್ನೆರಡು ವರ್ಷಗಳಿಗೆ ಕಲ್ಯಾಣಕ್ಕೆ ಬರುವುದಾಗಿ ತಿಳಿಸಿ, ದೇಶಪರ್ಯಟನಕ್ಕೆ ತೆರಳಿದರು.

ಆ ತರುವಾಯ ಅನುಭವಮಂಟಪದ ತತ್ವಗೋಷ್ಠಿಗಳೆಲ್ಲ ಚನ್ನಬಸವಣ್ಣನವರ ಮಾರ್ಗದರ್ಶನದಲ್ಲಿಯೇ ನಡೆಯುತ್ತಿದ್ದುವು. ಈ ಸಮಾಜ ಸುಧಾರಣೆಯ ಪ್ರಚಾರ ಚನ್ನಬಸವಣ್ಣನವರ ಶಿವಾನುಭವ ಮತ್ತು ಶಾಸ್ತ್ರಾನುಭವಗಳ ಆಧಾರದ ಮೇಲೆ ನಡೆಯುತ್ತಿತ್ತೆಂಬುದನ್ನು ಮರೆಯುವಂತಿಲ್ಲ. ಕ್ಷುದ್ರ ದೇವತೆಗಳ ಆರಾಧನೆಯನ್ನು ಮಾಡಬಾರದೆಂದೂ, ಪರಮಾತ್ಮನೊಬ್ಬನೇ ಎಂದೂ ಶಿವಶರಣರು ನಂಬಿ ಆಚರಿಸಿದರು. ಪರಮಾತ್ಮನೊಬ್ಬನೇ ಸತ್ಯ! ಅಂದರೆ, ಅವನ ಸೃಷ್ಟಿಯೂ ಸತ್ಯ! ಈ ಪ್ರಪಂಚವೇ ಪರಮಾತ್ಮನ ಶರೀರ. ನುಡಿದಂತೆ ನಡೆಯಬೇಕೆಂಬುದು ಶರಣರ ಆದರ್ಶವಾಯಿತು. ನಡೆ ನುಡಿಗಳ ಸಾಮರಸ್ಯವನ್ನು ಶರಣರು ಕ್ರಿಯಾಜ್ಞಾನಸಾಮರಸ್ಯ ಅಥವಾ ಲಿಂಗಾಂಗಸಾಮರಸ್ಯವೆಂದು ಹೇಳಿದರು. ಧರ್ಮ, ತತ್ವ. ಇವು ಸಮಾಜದ ಎರಡು ಕಣ್ಣುಗಳಿದ್ದಂತೆ. ಯಾವದೊಂದು ಕಣ್ಣು ವಿಕಾರವಾದರೂ ಮುಖದ ಅಂದ ಕೆಡುತ್ತದೆ. ಅದರಂತೆಯೇ ಧರ್ಮ ಮತ್ತು ತತ್ವ ಇವುಗಳೆರಡನ್ನೂ ಸಮಾಜ ಅವಲಂಬಿಸಬೇಕು. ಇವು ಯಾವುದೇ ಒಂದು ವಿಶಿಷ್ಟವರ್ಗದವರ ಸ್ವತ್ತಲ್ಲ. ಪ್ರತಿಯೊಬ್ಬರೂ ಇವುಗಳನ್ನು ಆಚರಿಸಿ, ಇಹ-ಪರಗಳನ್ನು ಸಾಧಿಸಬಹುದೆಂಬ ನಂಬುಗೆಯನ್ನು ಮೂಡಿಸಿದರು. ಸ್ತ್ರೀ ಪರಾಶಕ್ತಿ ಸ್ವರೂಪಿಣಿಯೆಂದೂ, ಲೋಕಮಾತೆಯೆಂದೂ, ಅವಳೂ ಧರ್ಮವನ್ನು ಅವಲಂಬಿಸಿ, ಮೋಕ್ಷ ಪಡೆಯಬಹು

ದೆಂದೂ ಹೇಳಿ, ಆಕೆಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಸಾರಿದರು. ಪ್ರತಿಯೊಬ್ಬರೂ ಕಾಯಕ ಮಾಡಬೇಕೆಂದೂ ಕಾಯಕವೇ ಕೈಲಾಸವೆಂದೂ ಶರಣರು ಮಾನವ ಸಮುದಾಯದಲ್ಲಿ ನವ ಚೈತನ್ಯವನ್ನು ತುಂಬಿದರು. ಬಸವಣ್ಣನವರು ಬಿಜ್ಜಳನ ಮಹಾ ಮಂತ್ರಿಯಾಗಿಯೂ, ಮಹಾದಂಡನಾಯಕರಾಗಿಯೂ ಇದ್ದುದ ರಿಂದ ಅವರಿಗೆ ಸಮಾಜ ಸುಧಾರಣೆಯ ಕಾರ್ಯದಲ್ಲಿ ಸಾಕಾದಷ್ಟು ವ್ಯವಧಾನವಿರಲಿಲ್ಲ. ಚನ್ನಬಸವಣ್ಣನವರು ಅನುಭವಮಂಟಪದ ಕಾರ್ಯಕಲಾಪಗಳನ್ನೂ ನೂತನ ಸಮಾಜದ ರಚನೆಯನ್ನೂ ಬಸವಣ್ಣನವರ ಇಂಗಿತವನ್ನೂ ಅರಿತು ನೆರವೇರಿಸುತ್ತಿದ್ದರು. ವಿಶ್ವಲಿಂಗದ ಆರಾಧನೆಯಲ್ಲಿ ಬಸವಣ್ಣನವರು ಗುರುಸ್ವರೂಪ ರಾದರೆ, ಚನ್ನಬಸವಣ್ಣನವರು ಜಂಗಮ ಸ್ವರೂಪರಾಗಿದ್ದರು. ಈ ಗುರು-ಜಂಗಮ ಸಂಬಂಧ ಅನ್ಯಾದೃಶವಾದುದು!

ಚನ್ನಬಸವಣ್ಣನವರ ಜೀವನ, ಸಾಧನೆ ಮತ್ತು ಸಿದ್ಧಿ ಇವು ಸಮಾಜದ ತಾತ್ವಿಕ, ಧಾರ್ಮಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿದುವು. ಅವರು ಪ್ರಾಪ್ತ ವಯಸ್ಕರಾದರೂ, ಸಂಸಾರಜೀವನದಲ್ಲಿ ಐಹಿಕ ಸುಖ ಭೋಗ ಗಳನ್ನು ಬಯಸಲಿಲ್ಲ; ಅಂಗನೆಯರ ಶೃಂಗಾರ ಲೀಲಾ ರಂಗದಲ್ಲಿ ತಣಿಯಲು ಅಪೇಕ್ಷಿಸಲಿಲ್ಲ; ಧನಕನಕವಸ್ತು ವಾಹನ ಗಜತುರಗ ಅಷ್ಟಭೋಗಗಳನ್ನು ನಿರೀಕ್ಷಿಸಲಿಲ್ಲ; ಆ ಸಮುದ್ರ ಪರ್ಯಂತ ಅಖಂಡ ಸಾಮ್ರಾಜ್ಯವನ್ನು ಆಳಲು ಮನಸ್ಸು ಮಾಡಲಿಲ್ಲ. ಅವರು ಮಾಯಾವಿರಕ್ತರಲ್ಲ; ಸಹಜವಿರಕ್ತರು. ಅವರು ಲಿಂಗ ಭಕ್ತಿನಿಷ್ಠರು. ಸರ್ವಸೃಷ್ಟಿಕರ್ತೃ ಪರಮಾತ್ಮನೆಂದೇ ಅವರು ನಂಬಿದರು. "ಗುಬ್ಬಚ್ಚಿ ಪೆರರ ಮನೆಯನ್ನು ತನ್ನ ಮನೆಯೆಂದು ತಿಳಿಯುವಂತೆ, ಈ ಜೀವಕೋಟಿ ಧರೆ, ಧನ, ವನಿತೆಯರನ್ನು

ತಮ್ಮವರು, ತಮ್ಮವರು ಎಂದು ನಂಬುತ್ತಾರೆ. ಅನಿತ್ಯ ಸುಖವನ್ನು ಸಾಧಿಸಲು ದೇವರನ್ನೂ ಮರೆತು ಹೋರಾಡಿ ಸಾಯುತ್ತಾರೆ. ಜನರು ನಿಜಾಚರಣೆಯ ನಿತ್ಯಸುಖವನ್ನು ಅರಿಯರು, ಕಾಡಿ ರಸದಾಳಿ ಕಬ್ಬಿನ ರುಚಿಯನ್ನು ಬಲ್ಲುದೆ! ನಾಯಿ ಕಲ್ಪವೃಕ್ಷವನ್ನು ಬಲ್ಲುದೆ! ಕತ್ತೆ ಚಿಂತಾಮಣಿಯನ್ನು ಬಲ್ಲುದೆ! ನರಿಯು ಪಟ್ಟಗಜವನ್ನು ಬಲ್ಲುದೆ! ಕಾಗೆ ಪರಮಾಮೃತವನ್ನು ಬಲ್ಲುದೆ! ಕುರುಡ ಕನ್ನಡಿಯಲ್ಲಿ ತನ್ನ ಬಿಂಬವನ್ನು ನೋಡಬಲ್ಲನೆ! ಷಂಡ ರತಿಸುಖವನ್ನು ಬಲ್ಲನೆ! ತೊತ್ತು ರಾಜಪತ್ನಿಯ ಭೋಗವನ್ನು ಬಲ್ಲಳೆ! ಹೇಡಿ ರಣಧೀರನಾಗಬಲ್ಲನೆ! ಹುಟ್ಟುಕಿವುಡ ಓಂಕಾರ ನಾದವನ್ನು ಕೇಳಬಲ್ಲನೆ! ದಟ್ಟದರಿದ್ರ ನವರತ್ನಗಳನ್ನು ಬಲ್ಲನೆ! ಅಂಬಳೆವನ್ನು ಹೊಗುವ ಜಿಸ್ತ ಅಷ್ಟಭೋಗಗಳನ್ನು ಬಲ್ಲನೆ; ಮೂಢ ಶಿವಕವಿತಾನಂದವನ್ನು ಬಲ್ಲನೆ! ಕಾಮುಕ ಶಿವಯೋಗ ಸುಖವನ್ನು ಬಲ್ಲನೆ! ಗೂಬೆ ಸೂರ್ಯಪ್ರಕಾಶವನ್ನು ಬಲ್ಲುದೆ! ಲೋಕದ ಅಜ್ಞಾನಿ ಮಾನವರು ಹೊನ್ನು, ಹೆಣ್ಣು, ಮಣ್ಣು, ಅನ್ನ, ನೀರು, ವಸ್ತ್ರ, ಆಭರಣ, ವಾಹನ—ಎಂಬ ಅಷ್ಟಮಲಗಳನ್ನು ಬಯಸಿ, ಬಾಯಾರಿ, ಕಂಗೆಟ್ಟು, ತೊಳಲಿ, ಬಳಲಿ ಮಾಯಾಪಾಶದಲ್ಲಿ ಸಿಕ್ಕಿ ಒದ್ದಾಡುತ್ತಾರೆ. ಅಂಥ ಜಡಜೀವರು ಪರಮೋನ್ನತ ಶಿವಯೋಗಾನಂದ ಸುಖವನ್ನು ಅರಿಯಲಾರರು. "ಈ ಸಂಸಾರವೆಂಬ ವಿಧಿಯ ಕೈಯಲ್ಲಿ ಹರಿ ಬ್ರಹ್ಮಾದಿ ಮೊದಲಾದವರೆಲ್ಲರೂ ಕೆಟ್ಟುಹೋದರು, ನೋಡಾ, ಕೂಡಲ ಚನ್ನಸಂಗಮದೇವಾ," ಎಂದು ಚನ್ನಬಸವಣ್ಣನವರು ಲೋಕವ್ಯಾಪಾರಾಸಕ್ತರನ್ನು ಕಂಡು ಮರುಗಿದರು. ಶಿವಶರಣರಲ್ಲಿಯೂ ಅನೇಕರು ಸಂಸಾರಿಗಳಿದ್ದರು. ಬಸವಣ್ಣನವರು ಇಬ್ಬರು ಪತ್ನಿಯರೊಂದಿಗೆ ಸಂಸಾರ ಮಾಡುತ್ತಿದ್ದರು. ಆದರೆ, ಶರಣರ

ಸಂಸಾರಲೀಲೆಯೇ ಬೇರೆ! ಅದು ಶರಣಸಂಸಾರ! ಋಷಿ ಜೀವನ! ಸಾಮಾನ್ಯರ ಸಂಸಾರದ ದುಃಖಮಯ! ತಾಪತ್ರಯ ಜೀವನ! ಚನ್ನಬಸವಣ್ಣನವರು ಲೋಗರ ಸಂಸಾರ ಭವಣೆಯನ್ನು ಕಂಡು ದುಃಖಿಸಿದರು! ಅವರು ವಿರತ ಜೀವನದಲ್ಲಿ ಮುಕ್ತಿಯನ್ನು ಕಂಡ ಮಹಾಂತರು! ಅನೇಕ ಮಹರ್ಷಿಗಳು ವಿವಾಹಜೀವನದಲ್ಲಿಯೂ ಮುಕ್ತಿಯನ್ನು ಸಾಧಿಸಿದರು. ಆದರೆ ಅಷ್ಟಾವರಣಯುಕ್ತವಾದ ವೀರಶೈವಸಮಾಜದಲ್ಲಿ ಗುರುಪದವಿಯಲ್ಲಿರುವವರಾಗಲಿ, ಜಂಗಮಸ್ಥಾನದಲ್ಲಿರುವವರಾಗಲಿ ಮದುವೆಯಾಗುವ ಸಂಪ್ರದಾಯವಿಲ್ಲ. ಬಸವಣ್ಣನವರು ಸಮಾಜಕ್ಕೆ ಗುರುಸ್ವರೂಪರಾಗಿದ್ದರೇ ಹೊರತು ಗುರು ಪದವಿಯಲ್ಲಿರಲಿಲ್ಲ. ಆದ್ದರಿಂದ ಅವರು ಸಂಸಾರದಲ್ಲಿಯೇ ಪರಮ ಸಾಧಕರಾಗಿದ್ದರು; ಗುರುಸ್ವರೂಪರಾಗಿದ್ದರು. ಚನ್ನಬಸವಣ್ಣನವರು ಸಮಾಜದಲ್ಲಿ ಜಂಗಮ ಪದವಿಯಲ್ಲಿದ್ದರು. ವೀರಶೈವದ ಶರಣಯುಗದಲ್ಲಿ ಇವರೇ ಅನಾದಿ ಜಂಗಮಮೂರ್ತಿಯೆನಿಸಿದರು; ಆದರೆ ಅವರು ವಿರಕ್ತರಲ್ಲ; ವಿರತರು! ವೀರಶೈವ ಧರ್ಮದಲ್ಲಿ ವಿರತರೇ ಬೇರೆ; ಚನ್ನಬಸವಣ್ಣನವರು ವಿರಕ್ತರಿಗೂ ಪರಮ ಪೂಜ್ಯರಾಗಿರುತ್ತಾರೆ. ಅವರು ತಮ್ಮ ಅಮೃತಹಸ್ತದಿಂದ ಭಕ್ತ ಸಂಕುಲವನ್ನು ಉದ್ಧರಿಸಿದರು. ನಾನಾ ಶೈವಪಂಥಗಳನ್ನು ಅನುಗ್ರಹಿಸಿ ವೀರಶೈವದಲ್ಲಿ ನೆಲೆಗೊಳಿಸಿದರು.

"ವಿಷದಷ್ಟವಾದ ನರನ ಗಾರಡ ಮಂತ್ರೌಷಧದಿಂದ, ಆರೋಗ್ಯಕಾಯನ ಮಾಡುವಂತೆ, ಶೈವ ಗುರುವಿನ ಕೈಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯಂಗೆ, ವೀರಶೈವ ಮಂತ್ರೋಪದೇಶದಿಂದ ಆತನ ಕಾಯಶುದ್ಧನ ಮಾಡಿ, ಆತನ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ ತುಂಬಿ, ಆತನ ಅಂಗದ ಮೇಲೆ ಲಿಂಗವ

ಬಿಜಯಂಗೈಸಿ, ಕೃತಕೃತ್ಯನಂ ಮಾಡಿದ ನಮ್ಮ ವೀರಶೈವ ಗುರು ಕೂಡಲ ಚನ್ನಸಂಗಮದೇವ''

—ಎಂದು ಅವರು ಹೇಳಿರುವಂತೆ ಶೈವವನ್ನು ವೀರಶೈವವಾಗಿ ಪರಿವರ್ತನೆಗೊಳಿಸಿದರು. ವೀರಶೈವದಲ್ಲಿ ಚನ್ನಬಸವಣ್ಣನವರ ಸ್ಥಾನ ವೈಶಿಷ್ಟ್ಯಪೂರ್ಣವಾದುದು! ಬಸವಣ್ಣನವರಿಗೆ ಚನ್ನಬಸವಣ್ಣನವರು ಪರಮಾಪ್ತಬಂಧು; ಅಂತರಂಗ ಮಿತ್ರ ರಾಗಿದ್ದರು. ಇಂಥ ಸೋದರಮಾವ ಇಂಥ ಸೋದರಳಿಯ ಅತ್ಯಂತ ಅಪೂರ್ವ! ಕೇವಲ ರಕ್ತ ಸಂಬಂಧದಲ್ಲಿಯೇ ಅಲ್ಲ, ಕರ್ತವ್ಯ ಪರಿಪಾಲನೆಯಲ್ಲಿಯೂ ಚನ್ನಬಸವಣ್ಣನವರಿಗೆ ನೆರ ವಾಗುತ್ತಿದ್ದರೆಂಬುದು ನಿಜ. ಬಸವಣ್ಣನವರು ತುಂಬ ಮೃದು ಹೃದಯಿ; ದಯಾಪೂರ್ಣರು! ಚನ್ನಬಸವಣ್ಣನವರು ಸುಸಂಸ್ಕೃತ ಹೃದಯಿ; ನಿರ್ದಾಕ್ಷಿಣ್ಯಚಿತ್ತರು. ಅವರ ಸಮಯೋಚಿತ ಸಲಹೆಯಾಗಲಿ, ಸಂಧಾನಚಾತುರ್ಯವಾಗಲಿ, ಸನ್ನಿವೇಶ ಪರಿಜ್ಞಾನದೃಷ್ಟಿಯಾಗಲಿ ನೆರವಾಗದಿದ್ದರೆ ಬಸವಣ್ಣನವರ ಸೌಮ್ಯಮನೋಭಾವ ದೀಪ್ಯಮಾನವಾಗಿ ಪ್ರಕಾಶಿಸುತ್ತಿರಲಿಲ್ಲ!

೭

ಅಲ್ಲಮರು, ಬಸವಣ್ಣನವರು ಮತ್ತು ಚನ್ನಬಸವಣ್ಣನವರು ಈ ಮೂವರೂ ಮಹಾಪುರುಷತ್ರಯರಾಗಿದ್ದಾರೆ. ಅಲ್ಲಮರ ವೈರಾಗ್ಯ, ಬಸವಣ್ಣನವರ ಭಕ್ತಿ, ಚನ್ನಬಸವಣ್ಣನವರ ಜ್ಞಾನ-ಇವು ಸಮಾಜವನ್ನು ಪರಿಷ್ಕರಿಸಿದುವು; ಶರಣ ಕುಲವನ್ನು ಉದ್ಧರಿಸಿದುವು. ಪ್ರಭು ಮತ್ತು ಬಸವಣ್ಣ-ಈ ಇಬ್ಬರ ಸಂಬಂಧವನ್ನೂ ಅರಿತಿದ್ದರು ಚನ್ನಬಸವಣ್ಣನವರು. "ಅನುಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ

ನಿನಗೆ ಸೇರಿತ್ತಾಗಿ ಬಸವಣ್ಣನ ಸಾಂಪ್ರದಾಯದ ಕಂದನು ನೋಡಾ, ನೀನು–ಭಕ್ತಿದಳದುಳದಿಂದ ಚನ್ನಸಂಗಮನಾಥನೆಂಬ ಲಿಂಗವನು ಗ್ರಹಿಸಿಕೊಂಡೆನಾಗಿ, ಬಸವಣ್ಣನ ಸಂಪ್ರದಾಯದ ಕಂದನು ನೋಡಾ, ನಾನು. ಇಂತಿಬ್ಬರಿಗೆಯೂ ಒಂದೇ ಕುಲ ಸ್ಥಲವಾದ ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಮಹಾಮನೆಯ ಪ್ರಸಾದ ಇಬ್ಬರಿಗೆಯೂ ಒಂದೆ ಕಾಣಾ ಪ್ರಭುವೆ"—ಎಂದು ಚನ್ನಬಸವಣ್ಣನವರು ಮತ್ತು ಅಲ್ಲಮರು ಇಬ್ಬರೂ ಒಂದೇ ಕುಲಸ್ಥಲದವರೆಂಬುದನ್ನೂ ಬಸವಣ್ಣನವರ ಮಹಾಮನೆಯ ಪ್ರಸಾದದಿಂದ ಇಬ್ಬರೂ ಬಸವಪಂಥಾನು ಯಾಯಿಗಳೇ ಆದರೆಂಬುದನ್ನೂ ಚನ್ನಬಸವಣ್ಣನವರು ನಿರ್ಧಾರವಾಗಿ ಹೇಳಿದ್ದಾರೆ. ಇವರು ಮೂವರು ಸಮಾಜ ಪುರುಷನ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಸ್ವರೂಪರಾಗಿ ದ್ದಾರೆ. ಈ ಲಿಂಗತ್ರಯು ಸಂಬಂಧದಂತೆ ಈ ಮಹಾಶರಣ ತ್ರಯು ಸಂಬಂಧ ಅಭೇದ್ಯವಾದುದು! ಅಲ್ಲಮರೂ ಬಸವಣ್ಣ ನವರೂ ಚನ್ನಬಸವಣ್ಣನವರ ಆತ್ಮಶಕ್ತಿಯನ್ನೂ, ತತ್ವಜ್ಞಾನ ವನ್ನೂ ಚೆನ್ನಾಗಿ ಬಲ್ಲರು. "ಭೂಮಿಯ ಸಾರದಲ್ಲೊಂದು ತರು ಬೆಳೆಯಿತ್ತು. ನವರಸಫಲವನ್ನಿತ್ತಿತ್ತು. ನೋಡಾ ಏನೆಂದರಿಯದೆ ಮರುಳಾದೆನು. ನಾನು ಮಾರಾದಿಯ ಬಲೆ ಯಲ್ಲಿ ಸಿಕ್ಕಿದೆನಯ್ಯಾ. ಕೂಡಲಸಂಗಮದೇವಯ್ಯಾ, ಚನ್ನ ಬಸವಣ್ಣನಿಂದಲಾನು ಬದುಕಿದೆನಯ್ಯಾ"–ಎಂದು ಬಸವಣ್ಣ ನವರು ಚನ್ನಬಸವಣ್ಣನವರ ವ್ಯಕ್ತಿತ್ವವನ್ನು ಮೆಚ್ಚಿದ್ದಾರೆ. ಅದರಂತೆಯೇ ಪ್ರಭುದೇವರ ದೃಷ್ಟಿಯಲ್ಲಿಯೂ ಚನ್ನಬಸವಣ್ಣ ನವರು ಶಿವಯೋಗಿ ಮತ್ತು ಆತ್ಮಾನುಸಂಧಾನದಲ್ಲಿ ಸಿದ್ಧಿಯನ್ನು ಪಡೆದ ಮಹಾಶರಣ! "ಬೆಳಗುವ ಜ್ಯೋತಿಯ ತಿರುಳಿನಂತೆ

ಹೊಳೆವ ಕಂಗಳಕಾಂತಿಯೊಳ ಹೊರಗೆನ್ನದೆ ಆಳವಟ್ಟ ಶಿವ ಯೋಗಿಯ ಕಂಡೆ ನೋಡಾ! ನಿಜಉಂಡ ನಿರ್ಮಳದ ಘನವ ಕಂಡು ಬೆರಗಾದೆ ನಾನು! ಗುಹೇಶ್ವರ ಲಿಂಗದಲ್ಲಿ ಚನ್ನಬಸವಣ್ಣ ನಿಂದ ನಾನು ಬದುಕಿದೆನು"–ಎಂದು ಅಲ್ಲಮರು ಚನ್ನಬಸವಣ್ಣ ನವರ ಶಿವಜ್ಞಾನಸಂಪತ್ತನ್ನು ಕಂಡು ಕೊಂಡಾಡಿದ್ದಾರೆ!

ಚನ್ನಬಸವಣ್ಣನವರು ಶಿವಪಥದಲ್ಲಿ ಆಚಾರ್ಯನಾಗಿ ದ್ದಂತೆಯೇ ರಾಜಕೀಯಕ್ಷೇತ್ರದಲ್ಲಿ ಚಿಕ್ಕದಣ್ಣಾಯಕನಾಗಿದ್ದರು. ಅವರು ಬಿಜ್ಜಳನಿಗೆ ರಾಜನೀತಿಯನ್ನು ಬೋಧಿಸಿದರೆಂದು ಚನ್ನಬಸವ ಪುರಾಣದಲ್ಲಿ ಉಕ್ತವಾಗಿದೆ. ಅವರು ಬಸವಣ್ಣ ನವರ ತರುವಾಯ ಬಿಜ್ಜಳನ ಮಂತ್ರಿಯಾಗಿದ್ದರೆಂದು ನಿರಂಜನ ವಂಶರತ್ನಾಕರದಲ್ಲಿ ಹೇಳಿದೆ. ಅವರಿಗೆ ರಾಜಕಾರ್ಯರಂಗದಲ್ಲಿ ಸಾಕಷ್ಟು ತಿಳಿವಳಿಕೆಯಿತ್ತು. ರಾಜ್ಯಾಂಗ ವ್ಯವಹಾರದಲ್ಲಿ ಅವರಿಗೆ ನಿಕಟಸಂಪರ್ಕವಿದ್ದಿತೆಂದು ಭಾವಿಸಿದರೂ, ರಾಜ್ಯ ಸಂರಕ್ಷಣಾಂಗವೆನಿಸಿದ ಚತುರಂಗಬಲ ವಿನ್ಯಾಸದಲ್ಲಿ ಅವರು 'ಪ್ರಯೋಗಪರಿಣತಮತಿ'ಗಳಾಗಿರಲಿಲ್ಲ! 'ಅರಸಿನಹೆಸರಿಟ್ಟ ಅನಾಮಿಕನಂತೆ ನಾಮಕ್ಕರುಹರಲ್ಲದೆ ಪಟ್ಟಕ್ಕರುಹರೇ'?; ಅರಸಿನ ಹೆಸರ ಅನಾಮಿಕಂಗೆ ಅರಮೊತ್ತಿಗೆಯ ಸಿರಿ ದೊರೆಯು ದಂತೆ; 'ಧನಸಂಪನ್ನರೆಲ್ಲ ರಾಜನಿಗೆ ಭಾಜನರಾದರು ನೋಡಯ್ಯಾ!;' ಕ್ಷತ್ರಿಯ ಭಕ್ತನಾದಡೇನಯ್ಯಾ ಕ್ರೋಧ ಹಿಂಸೆಯ ಬಿಡದನ್ನಕ್ಕ!; 'ಪರುಷದ ಅಗಸಿಂಗೆ ಕಬ್ಬುನದ ಪರಿವಾಳದಂತೆ' ಎಂಬ ಅನೇಕ ಕಾವ್ಯೋಕ್ತಿಗಳನ್ನು ಸಂದರ್ಭೋಚಿತವಾಗಿ ಚನ್ನಬಸವಣ್ಣನವರು ಪ್ರಯೋಗಿಸಿದಂತೆ 'ಚನ್ನಬಸವ ಪುರಾಣದಲ್ಲಿ ಹೇಳಿರುವುದನ್ನು ಗಮನಿಸಿದರೆ, ಅವೆಲ್ಲ ಅವರ ಲೋಕವ್ಯವಹಾರಜ್ಞಾನವನ್ನು ತೋರಿಸುತ್ತ

ವೆಯೇ ಹೊರತು, ಅವರಿಗೆ ರಾಜ್ಯ ವ್ಯವಹಾರ ಸಂಬಂಧವಾದ ರಾಜತಂತ್ರದಲ್ಲಿ ಪ್ರತ್ಯಕ್ಷಾನುಭವವಿದ್ದಿತೆಂದು ಹೇಳಲು ಸಾಧ್ಯವಿಲ್ಲ. ಅವರು ಷಟ್ಸ್ಥಲಜ್ಞಾನ ನಿಷ್ಣಾತರಾಗಿದ್ದಂತೆಯೇ ರಾಜತಂತ್ರ ಪರಿಜ್ಞಾನಕುಶಲರಾಗಿರಲು ಯೋಗ್ಯ ಸನ್ನಿವೇಶವಾಗಲಿ, ಅವಕಾಶವಾಗಲಿ ಅವರಿಗೆ ಒದಗಿರಲಿಲ್ಲ. ಅವರು ಶರಣತತ್ವ ತಾಂತ್ರಿಕರೇ ಹೊರತು ರಣತತ್ವತಾಂತ್ರಿಕರಲ್ಲ!

ಮಾನವ ಸಮಾಜದಲ್ಲಿ ಆಗಾಗ ಹೊಸ ಹೊಸ ಭಾವನೆಗಳು ಮೂಡಿಬರುತ್ತವೆ. ಇದು ಪ್ರಕೃತಿನಿಯಮ. ಜನತೆಯ ಜಡತೆಯನ್ನು ಬಡಿದೆಬ್ಬಿಸಿ ಶಾಂತಕ್ರಾಂತಿಯನ್ನು ಮೂಡಿಸಿದ ಕೀರ್ತಿ ಅಂದು ಕಲ್ಯಾಣಕ್ಕೆ ಸಂದಿತು! ಕಲ್ಯಾಣವೇ ಶರಣ ಧರ್ಮ ಕೇಂದ್ರವಾಗಿತ್ತು. ಬಸವಣ್ಣನವರು ಆ ಧಾರ್ಮಿಕ ಕ್ರಾಂತಿಯ ಮಾರ್ಗದರ್ಶಕರಾಗಿದ್ದರು! ಚನ್ನಬಸವಣ್ಣನವರು ಮಹಾ ಆಚಾರ್ಯರಾಗಿದ್ದರು! ಆ ಧರ್ಮಕ್ರಾಂತಿಯ ಬೆಳಕಿನಲ್ಲಿ ನೂತನ ಸಮಾಜ ರೂಪುಗೊಂಡಿತು. ಚನ್ನಬಸವಣ್ಣನವರ ಧೀರ ಮನೋಭಾವ ಮತ್ತು ನಿಸ್ಪೃಹ ಚಿತ್ತವೃತ್ತಿ ಸಮಾಜವನ್ನು ಪುಷ್ಟಿಗೊಳಿಸಿದುವು; ತುಷ್ಟಿಗೊಳಿಸಿದುವು. ಅವರು ಸಮಾಜವನ್ನು ಸತ್ಪಥದಲ್ಲಿ ನಡೆಸುತ್ತಿದ್ದರು. ನೂತನ ಸಮಾಜದ ಹಿತ ದೃಷ್ಟಿಯಿಂದ ಅವರು ಒಮ್ಮೊಮ್ಮೆ ಬಸವಣ್ಣನವರನ್ನೂ ಪ್ರತಿಭಟಿಸುತ್ತಿದ್ದರು. ಅವರಿಗೆ ಪುರಾತನರಲ್ಲಿಯೂ ನೂತನರಲ್ಲಿಯೂ ಭಕ್ತಿ ಗೌರವಗಳಿದ್ದರೂ ಅವರು ಸರ್ವಾಂಗ ಸೌಷ್ಟವ ಮತ್ತು ಸರ್ವಾಂಗಸೌಂದರ್ಯಪೂರ್ಣವಾದ ಸಮಾಜವನ್ನು ನಿರ್ಮಾಣ ಮಾಡುವುದರಲ್ಲಿ ಹಿರಿಯರನ್ನೂ ತಮ್ಮ ಪ್ರಭಾವದಿಂದ ತಮ್ಮ ಮಾರ್ಗದಲ್ಲಿಯೇ ನಡೆಸುತ್ತಿದ್ದರು! ಅವರ ಅಸಾಧಾರಣ ಪ್ರತಿಭೆ, ವಿದ್ಯಾವೈದುಷ್ಯ, ಲೋಕ ಹಿತಚಿಂತನೆ, ಧರ್ಮಜ್ಞಾನ

ನೈಪುಣ್ಯ–ಇವು ಧರ್ಮಕ್ರಾಂತಿಯ ತೇಜಃಪುಂಜಕಿರಣಗಳಂತೆ ಬೆಳಗುತ್ತಿದ್ದುವು. ಅವರು ಸಮಾಜವನ್ನು ಪುನರುಜ್ಜೀವಗೊಳಿಸಿ, ಸಮಾಜದಲ್ಲಿ ಭಕ್ತಿ, ಜ್ಞಾನ, ಕ್ರಿಯಾಶಕ್ತಿಗಳನ್ನು ಬೆಳಸಿದರು. ದುರಾಚಾರಗಳನ್ನು ತಪ್ಪಿಸಿ, ಜನಮನದಲ್ಲಿ ಪರಿಶುದ್ಧ ಆಸ್ತಿಕ ಮಾರ್ಗವನ್ನು ನಿರ್ಮಿಸಿದರು. ಮರ್ತ್ಯವೇ ಮಹರ್ಲೋಕವಾಗಬೇಕೆಂಬುದು ಅವರ ಅಭಿಮತ.

ಲಿಂಗವಂತಧರ್ಮ ಎಲ್ಲ ಜನವರ್ಗವನ್ನೂ ಆಕರ್ಷಿಸಿತು; ಆಹ್ವಾನಿಸಿತು. ವೈಯಕ್ತಿಕವಾಗಿ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳುವವರ ಮಾತು ಬೇರೆ. ಆದರೆ ಸಾಮೂಹಿಕವಾಗಿ, ಸಾಮಾಜಿಕವಾಗಿ ನಾಡಿಗೆ ನಾಡೇ ಉದ್ಧಾರವಾಗಬೇಕೆಂಬುದು ಶರಣ ಜೀವನದ ಧ್ಯೇಯ. ಅದನ್ನು ಸಾಧಿಸಲು ಚನ್ನಬಸವಣ್ಣನವರು ಶಿವಾನುಭವ ಗೋಷ್ಠಿಗಳನ್ನು ಸಂಸ್ಥಾಪಿಸಿದರು. ನಾಡಿನ ಎಲ್ಲ ಭಾಗಗಳಲ್ಲಿಯೂ ಗುರುಮಠಗಳನ್ನು ಜಂಗಮಮಠಗಳನ್ನೂ ನಿರ್ಮಿಸಿದರು. ಭಕ್ತ ವೃಂದವನ್ನು ಶಿವಪಥದಲ್ಲಿ ನಡೆಸಲು ಈ ಮಠಗಳು ಧಾರ್ಮಿಕ ಕ್ಷೇತ್ರಗಳಂತಿದ್ದುವು. ಜನರಲ್ಲಿ ಸದಾಚಾರ, ಸತ್ಕ್ರಿಯೆ, ಶಿವಜ್ಞಾನಸಂಪತ್ತು ವೃದ್ಧಿಯಾದುವು; ಅಂಧ ಸಂಪ್ರದಾಯಗಳೂ, ಅನಾಚಾರಗಳೂ ನಿರ್ಮೂಲವಾದುವು. ಸಮಾಜದಲ್ಲಿ ಅನೇಕ ದೇವತೆಗಳ ಪೂಜೆ ನಡೆಯುತ್ತಿತ್ತು. ಹೆಂಡತಿ ಮಾರಿಯ ಭಕ್ತೆ; ಗಂಡ ಭೈರವನ ಭಕ್ತ; ಅಪ್ಪ ಭೂತನಾಥನ ಭಕ್ತ; ಅಮ್ಮ ಕಾಳಿಕಾದೇವಿಯ ಭಕ್ತೆ! ಈ ಅನೇಕ ದೇವತೆಗಳ ಪೂಜೆಯಲ್ಲಿ ಪ್ರಾಣಿ ಬಲಿಯೂ ನಡೆಯುತ್ತಿತ್ತು. ಶರಣರು ಏಕದೇವತೋಪಾಸನೆಯನ್ನು ಬೋಧಿಸಿದರು. ಚನ್ನಬಸವಣ್ಣನವರು ಅನ್ಯದೇವತಾರಾಧನೆಯನ್ನು ಒಪ್ಪಲಿಲ್ಲ. “ಪತಿವ್ರತೆಯಾದಡೆ ಅನ್ಯಪುರುಷರ ಸಂಗವೇತಕ್ಕೆ?

ಲಿಂಗಸಂಗಿಯಾದಡೆ ಅನ್ಯಲಿಂಗದಸಂಗವೇತಕ್ಕೆ ? ಕಂಡ ಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ ಒಬ್ಬರ ಕೈವಿಡಿದು ಒಬ್ಬರಿಗೆ ಮಾತುಗೊಟ್ಟು ಮತ್ತೊಬ್ಬರಿಗೆ ಸನ್ನೆಯ ಮಾಡುವ ಬೋಸರಗಿತ್ತಿಯಂತೆ; ಪ್ರಾಣ ಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಹರಸಿ, ಪೊಡಮಡುವ ಕೋಟಲೆಗೊಳಲೇತಕ್ಕೆ ? ಇದು ಕಾರಣ, ಕೂಡಲ ಚನ್ನಸಂಗಯ್ಯಾ, ಇಂತಪ್ಪ ಪಾಪಿಗಳನೆನಗೆ ತೋರಿಸ ದಿರಯ್ಯಾ !"–ಎಂದು ಅವರು ಇಷ್ಟ ಲಿಂಗಪೂಜಾ ನಿಷ್ಠರಾಗಿರ ಬೇಕೆಂದೂ ಸ್ಥಾವರಲಿಂಗಪೂಜೆಯನ್ನು ಮಾಡಬಾರದೆಂದೂ ಸಾರಿ ಹೇಳಿದರು.

ದೇವರ ಸೃಷ್ಟಿಯಲ್ಲಿ ಹೀನಜಾತಿಯೆಂಬುದಿಲ್ಲ. ಎಲ್ಲರೂ ಶಿವಾಂಶ ಸಂಭವರು. ಅವರು ತಮ್ಮ ಕ್ರಿಯಾಚಾರಗಳಿಂದ ಉತ್ತಮ ರಾಗುತ್ತಾರೆ ಅಥವಾ ಹೀನರಾಗುತ್ತಾರೆ. ಜನ್ಮತಃ ಯಾರೂ ಶ್ರೇಷ್ಠರಲ್ಲ ಎಂಬ ತತ್ವವನ್ನು ಸಮಾಜ ಅರಿಯಿತು ! ಈ ಹೊಸ ಭಾವನೆ ಸಮಾಜದಲ್ಲಿ ಚೈತನ್ಯವನ್ನು ತುಂಬಿತು. ಕೆಸರಿನಲ್ಲಿ ಹುಟ್ಟಿದ ತಾವರೆ ದೇವರ ಮಂಡೆಯಮೇಲೆ ಇಡಬಲ್ಲುದು ; ಉಚ್ಚಿಷ್ಟದಲ್ಲಿ, ಜಲಮಲಗಳಲ್ಲಿ, ಸಮಸ್ತಲೋಕದಲ್ಲಿ ಸೂರ್ಯನ ಕಿರಣಗಳು ಬೀಳುತ್ತವೆ. ಆದರೆ ಅವು ಮಲಿನವಾಗುತ್ತವೆಯೆ ? ಹೊಲೆ ಹದಿನೆಂಟು ಜಾತಿಗಳಲ್ಲಿಯೂ ನೂರೊಂದು ಕುಲದಲ್ಲಿಯೂ ಶರಣರು ಹುಟ್ಟಿದರೆ ಅವರು ಆ ಜಾತಿಕುಲಗಳಂತಿರುವುದಿಲ್ಲ ! ಸಾಕ್ಷಾತ್ ಪರಬ್ರಹ್ಮವಸ್ತುವೇ ಇಹಸಂಸಾರಿಯಾಗಿ ಬಂದಂತೆ ಗೌರವಿಸಬೇಕು. ಕ್ರಿಯಾಚಾರಗಳಲ್ಲದೆ, ಅರಿವಿನ ನೆಲೆಯನ್ನು ಅರಿಯದೆ ತಾನೇ ದೇವರೆಂದು ಅಹಂಕಾರಪಡುವ ಅನಾಚಾರಿ ಗಳಾದ ಹೊಲೆಯರಿಗೆ ನರಕವೇ ಗತಿಯೆಂದು ಚನ್ನಬಸವಣ್ಣ ನವರು ಸ್ಪಷ್ಟವಾಗಿ ತಿಳಿಸಿದರು. ಶಿವಭಕ್ತಿ, ಶಿವಪೂಜೆ, ಶಿವ

ಧ್ಯಾನ, ಶಿವಸಂಗೋಷ್ಠಿಯಿಂದ ಸಮಾಜ ಪರಿಶುದ್ಧವಾಯಿತು. ಹುಟ್ಟಿನಿಂದ ಪ್ರಾಶಸ್ತ್ಯವಿಲ್ಲ; ಗುಣದಿಂದ ಪ್ರಾಶಸ್ತ್ಯವೆಂಬ ಧರ್ಮಕ್ರಾಂತಿಯನ್ನು ಚನ್ನಬಸವಣ್ಣನವರು ನಾಡಿನಲ್ಲಿ ಹಬ್ಬಿಸಿದರು. ಹೀನಮಾನವರನ್ನು ಸಂಸ್ಕರಿಸಿದಂತೆಯೇ ಉತ್ತಮ ವರ್ಣದವರೆಂಬುವರನ್ನೂ ಕತ್ತಲೆಯಿಂದ ಬೆಳಕಿಗೆ ತಂದುಬಿಟ್ಟರು "ಅಹಿಂಸಾ ಪರಮೋಧರ್ಮವೆಂದೋದಿ, ಆ ಸುರಭೋಜನಕ್ಕೆ ಅಂಗವಿಸಿ, ಕರ್ಮವ ಮಾಡಿ ಹೋತನಕೊಂದುತಿಂಬುದು ಪಾತಕವಲ್ಲವೇ?"—ಎಂದು ಚನ್ನಬಸವಣ್ಣನವರು ಯಜ್ಞಯಾಗಗಳಲ್ಲಿ ಪಶುವಧೆಯಾಗುತ್ತಿದ್ದುದನ್ನು ಖಂಡಿಸಿದರು ಮುಮುಕ್ಷುಗಳು ಮಾತ್ರ ಲಿಂಗಧಾರಿಗಳಾಗಬೇಕೆಂದು ಹೇಳಿದರಲ್ಲದೆ, ಮದ್ಯಪಾನಿ, ಮಾಂಸಾಹಾರಿ, ಜೂಜುಗಾರ, ವ್ಯಭಿಚಾರಿ ಮತ್ತು ಅಂಗಹೀನರಿಗೆ ಲಿಂಗಸಾಹಿತ್ಯ ಮಾಡಬಾರದೆಂದು ನಿಷ್ಠುರವಾಗಿಯೇ ಹೇಳಿದರು. ಬ್ರಾಹ್ಮಣ ಮೂರು ವರ್ಷಕಾಲವೂ ಕ್ಷತ್ರಿಯ ಆರು ವರ್ಷ ಪರ್ಯಂತವೂ, ವೈಶ್ಯ ಒಂಭತ್ತು ವರ್ಷಕಾಲವೂ, ಶೂದ್ರ ಹನ್ನೆರಡು ವರ್ಷಕಾಲವೂ ವೀರಶೈವ ವಾತಾವರಣದಲ್ಲಿ ಶುದ್ಧನಾದ ಮೇಲೆ ಅವನಿಗೆ ಲಿಂಗಧಾರಣೆ ಮಾಡಬೇಕೆಂಬುದು ಚನ್ನಬಸವಣ್ಣನವರ ಅಭಿಪ್ರಾಯ. ಹೀಗೆ ಶರಣಶಿಕ್ಷಣ ಪಡೆದವರೆಲ್ಲರೂ ಶಿವಭಕ್ತರಾಗಲಾರರೆಂಬುದೂ ನಿಜ. ಅನೇಕ ಕಾಲ ಬಕಪಕ್ಷಿ ಹಂಸಸಂಕುಲ ಸಂಗದಲ್ಲಿದ್ದರೆ ಅದು ಶುಚಿಯಾಗಬಲ್ಲುದೆ? ಗಂಗಾನದಿಯಲ್ಲಿದ್ದರೇನು ಕಲ್ಲು ಮೃದುವಾಗಬಲ್ಲುದೆ? ಕಲ್ಪವೃಕ್ಷದ ನೆರಳಿನಲ್ಲಿದ್ದರೂ ಒಣಕೊರಡು ಚಿಗುರಬಲ್ಲುದೆ? ಕಾಶಿಯಲ್ಲಿರುವ ನಾಯಿಯೆಂದ ಮಾತ್ರಕ್ಕೆ ಅದರ ಹಾಲು ಪಂಚಾಮೃತಕ್ಕೆ ಯೋಗ್ಯವೆ? ಖಂಡುಗ ಹಾಲಿನಲ್ಲಿದ್ದರೂ ಇದ್ದಿಲು ಬಿಳುಪಾಗಬಲ್ಲುದೆ? ದುರಾತ್ಮ

ಎಂದಿಗೂ ಸದ್ಭಕ್ತನಾಗಲಾರನೆಂಬುದನ್ನು ಚನ್ನಬಸವಣ್ಣನವರು ಮನಗಂಡಿದ್ದರು. ಅಂಥವರು ನಾನಾ ಜನ್ಮಗಳಲ್ಲಿ ಮಾನವರಾಗಿ ಹುಟ್ಟಿ, ಸತ್ಕರ್ಮಾಚರಣೆಯಿಂದ ಪಾಪದೂರರಾಗಿ ಶಿವಭಕ್ತರಾಗ ಬೇಕೆಂಬುದನ್ನು ಅವರು ಒಪ್ಪಿದ್ದರು. ಈ ಜೀವರು ಪೂರ್ವಪುಣ್ಯ ಸಂಸ್ಕಾರದಿಂದ ಸತ್ಕುಲದಲ್ಲಿ ಹುಟ್ಟಿ, ಶಿವಸಂಸ್ಕಾರಹೊಂದಿ, ಸದ್ಗುರುವಿನಿಂದ ಲಿಂಗಸಾಮರಸ್ಯವನ್ನು ಪಡೆದು, ಅಷ್ಟಾವರಣವೇ ಲಿಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಷಟ್ಸ್ಥಲಸಾಧಕರಾಗಿ ಚಿರಸುಖಿಗಳಾಗಬೇಕೆಂದು ಅವರು ತಮ್ಮ ಸಿದ್ಧಾಂತವನ್ನು ಜಗತ್ತಿಗೆ ತಿಳಿಸಿದರು. ಲಿಂಗವಂತ ಧರ್ಮವೆಂದರೆ ಸುಸಂಸ್ಕೃತರಿಗೆ ಮಾತ್ರ ಶಿವದೀಕ್ಷೆಯನ್ನು ಅನುಗ್ರಹಿಸುವ ಧರ್ಮವೆಂಬುದನ್ನು ಅವರು ನಿರ್ದಿಷ್ಟವಾಗಿ ಹೇಳಿದರು. "ಲಿಂಗದಮೇಲೆ ಲಿಂಗವುಳ್ಳ ದೆಲ್ಲಾ ಸಂಗಮನಾಥನೆಂಬ ಭಾವ ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ" ಎಂದು ಅವರು ಕಠೋರ ಸತ್ಯವನ್ನೇ ನುಡಿದರು. ಅವರಿಗೆ ಬಸವಣ್ಣನವರು ಪೂಜ್ಯರು; ಆದರೆ, ಸತ್ಯ ಅವರಿಗಿಂತಲೂ ಪೂಜ್ಯತರವಾದುದು! ಅನರ್ಹರಾದ ಜನರಿಗೆ ಲಿಂಗಧಾರಣೆ ಮಾಡಿದರೆ ಯಾವ ಪುರುಷಾರ್ಥವೂ ಇಲ್ಲ.

"ಮುತ್ತಿನಸಮೊತ್ತವ ಕತ್ತೆಗಲಂಕರಿಸಿದಡೇನು! ಅದಕ್ಕೆ ಮುತ್ತಿನಬೆಲೆ ಗೊತ್ತಾಗಬಲ್ಲುದೆ? ಬುತ್ತಿಯನೆನಿಸುಹೊತ್ತು ನೆತ್ತಿಯಲ್ಲಿ ಹೊತ್ತಡೇನು; ತೃಪ್ತಿಯಾಗಬಲ್ಲುದೆ? ನೈಷ್ಠೆ ಇಲ್ಲದ ಕಷ್ಟಜೀವಿಗೆ ಇಷ್ಟಲಿಂಗವ ಕಟ್ಟಿದಡೇನು? ಶ್ರೇಷ್ಠ ಶಿವಭಕ್ತನಾಗ ಬಲ್ಲನೆ? ಆದು ಕಾರಣ ಉತ್ತಮಾಧಿಕಾರಿಯನರಿದು ಇಷ್ಟಲಿಂಗವ ಕೊಟ್ಟ ಗುರುವಿಗೆ ಕೂಡಲ ಚನ್ನಸಂಗಯ್ಯನು ಮೆಚ್ಚಿ ಮನ್ನಣೆಯನೀವನು"

—ಎಂದು ಚನ್ನಬಸವಣ್ಣನವರು ತಾವು ರೂಪಿಸಿದ ಸಮಾಜ

ಚಿತ್ರವನ್ನು ವಿವರಿಸಿದರು. ಈ ನೂತನ ಸಮಾಜದಲ್ಲಿ ಧರ್ಮ ಕಾಂತಿ ತುಂಬಿ ಪೂರ್ಣತೇಜಸ್ಸು ಬೆಳಗಲು ಅವರು ಗುರು, ಲಿಂಗ, ಜಂಗಮ, ಪಾದೋದಕ, ಪಂಚಾಚಾರ, ಅಷ್ಟಾವರಣ, ಷಟ್ಸ್ಥಲ ಮುಂತಾದ ಮತಪ್ರಕ್ರಿಯೆಗಳನ್ನು ಸರಳಸುಂದರ ವಚನಗಳಲ್ಲಿ ನಿರೂಪಿಸಿದರು. ಈ ಪ್ರಕ್ರಿಯೆಗಳನ್ನು ಅವರು ಹೊಸದಾಗಿ ರಚಿಸಲಿಲ್ಲ. ಹಿಂದಿನಿಂದಲೂ ಅವು ವೀರಶೈವದಲ್ಲಿ ಆಚರಣೆ ಯಲ್ಲಿದ್ದುವು. ಶಿವಾಗಮಗಳಲ್ಲಿ ಸಂಸ್ಕೃತ ಭಾಷೆಯಲ್ಲಿ ಇವು ಉಕ್ತವಾಗಿವೆ. ಚನ್ನಬಸವಣ್ಣನವರು ಆ ಮೂಲಪ್ರಕ್ರಿಯೆ ಗಳನ್ನು ತಿಳಿಗನ್ನಡದಲ್ಲಿ ಜನಸಾಮಾನ್ಯರಿಗೂ ತಿಳಿಯುವಂತೆ ಹೇಳಿದರು.

೮

ವೀರಶೈವದಲ್ಲಿ ಗುರು ಲಿಂಗ ಜಂಗಮ—ಇವು ಪ್ರಸ್ಥಾನತ್ರಯ ವಿದ್ದಂತೆ. ಈ ತತ್ವತ್ರಯದ ಅರಿವೇ ವೀರಶೈವ ಸಿದ್ಧಾಂತ. ಗುರುಧರ್ಮ ಅಸದೃಶವಾದುದು ; ಅನಿರ್ವಚನೀಯವಾದುದು. ಸಾಧಕನಿಗೆ ಶಿವದೀಕ್ಷೆಯಲ್ಲಿ ಇಷ್ಟಲಿಂಗಪ್ರದಾನಮಾಡಿ ಬ್ರಹ್ಮೋಪದೇಶವನ್ನು ಅನುಗ್ರಹಿಸುವ ಸದ್ಗುರು ವೀರಶೈವನೇ ಆಗಿರಬೇಕೆಂಬುದನ್ನು ಮರೆಯುವಂತಿಲ್ಲ. ಗುರುವಿನ ಸ್ಥಾನ ಅತ್ಯುನ್ನತವಾದುದು. ಗುರುವೆ ಶಿವನು ಶಿವನೆ ಶ್ರೀಗುರು ನೋಡಾ. "ಗುರುದ್ವೈವಾತ್ ಪರಂನಾಸ್ತಿ" ಎಂಬುದಾಗಿ, ಗುರುವಿನಿಂ ದಧಿಕವಿಲ್ಲ. "ಶಿಷ್ಯದೀಕ್ಷಾದಿ ಕಾರಣಾತ್" ಎಂಬುದಾಗಿ, "ಎನ್ನನಿಮಿತ್ತ ಗುರುಮೂರ್ತಿಯಾದೆ ಕೂಡಲಚನ್ನಸಂಗಮ ದೇವಾ"— ಎಂದು ಚನ್ನಬಸವಣ್ಣನವರು ಶ್ರೀ ಗುರುವಿನ ಮಹಿಮೆಯನ್ನು ಬೋಧಿಸಿದರು. ಗುರುವೆ ಸದಾಶಿವ, ಗುರುವೆ

ಮಹಾಮಹಿಮ, ಗುರುವೆ ಅಕಲ್ಪಿತ ನಿತ್ಯ ನಿರವಯ, ಸಾಕಾರ ವಿಡಿದು ಗುರುಲಿಂಗವಾದ, ನಿರಾಕಾರವಿಡಿದು ಪ್ರಾಣಲಿಂಗವಾದ; ಅಂಥ ಗುರು ನಿಂದಸ್ಥಾನ ಕಾಶೀಕ್ಷೇತ್ರ ; ಆ ಗುರುಚರಣ ಪ್ರಕ್ಷಾಲನೋದಕವೆ ಗಂಗಾತೀರ್ಥ ; ಗುರು ಲಿಂಗವೇ ಸಾಕ್ಷಾತ್ ಪರಮಶಿವನಿಗಿಂತ ವಿಶೇಷ ! ಗುರುದರ್ಶನವೆ ಪರಮಪೂಜೆ ; ಗುರು ಧ್ಯಾನವೇ ರುದ್ರಗಾಯತ್ರಿ ! ಗುರುವಿನಿಂದ ಅತಿಶಯ ಘನವೇನೂ ಇಲ್ಲ ! ಎಂಬ ಮನೋಭಾವ ಸಮಾಜದಲ್ಲಿ ಮೂಡಿತು ! ಆ ಗುರು ವೇಷಲಾಂಛನಧಾರಿಯಾಗಿರಬಾರದು ; ಉದರಪೋಷಕ ರಾಗಿರಬಾರದು. ಅಂಥವರು ಕೇವಲ ವೇಷಡಂಭಕರಾದಾರು !

ಗುರುತತ್ವದಂತೆಯೇ ಲಿಂಗತತ್ವವೂ ಪರಮಪವಿತ್ರವಾದುದು. ಈ ಸೃಷ್ಟಿಯ ಮೂಲ ಶಕ್ತಿಯೊಂದಿದೆ ಅದನ್ನು ಬ್ರಹ್ಮ, ಪರಮಾತ್ಮ ಮತ್ತು ಶೂನ್ಯ ಎಂದು ಬೇರೆ ಬೇರೆ ಹೆಸರುಗಳಿಂದ ತತ್ವವೇತ್ತರು ಕರೆಯುತ್ತಾರೆ. ಆ ಮಹಾಶಕ್ತಿಯಿಂದಲೇ ಈ ಜಗತ್ತು ಆವಿರ್ಭವಿಸುತ್ತದೆ. ಅದು ಅವ್ಯಕ್ತ ; ಅಗೋಚರ, ಅಪ್ರತಿಮ. ಆ ಪರಾತ್ಪರ ವಸ್ತುವನ್ನೇ ವೀರಶೈವರು ಮಹಾ ಲಿಂಗವೆಂದು ಭಾವಿಸುತ್ತಾರೆ. “ಅಂಗುಷ್ಠ ಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ; ಮಧ್ಯ ಆತ್ಮನಿತಿಷ್ಠತಿ” ಎಂದರೆ ಜೀವಿಯ ಹೃದಯದಲ್ಲಿ ಅಂಗುಷ್ಠ ಪ್ರಮಾಣ ಚೈತನ್ಯವಸ್ತು ಜ್ಯೋತಿ ರೂಪದಿಂದ ಬೆಳಗುತ್ತದೆಂದು ಕಠೋಪನಿಷತ್ತು ತಿಳಿಸು ತ್ತದೆ. ಆ ಚಿತ್ಪ್ರಕಾಶವನ್ನು ಇಷ್ಟ ಲಿಂಗರೂಪದಲ್ಲಿ ಗುರುವು ಶಿಷ್ಯನಿಗೆ ಅನುಗ್ರಹಿಸಿ ಆಶೀರ್ವದಿಸುತ್ತಾನೆ. ಆ ನಿರಾಕಾರ ಸ್ಥಿತಿಯನ್ನು ಸಾಕಾರದಿಂದ ಭಕ್ತ ಆರಾಧಿಸುತ್ತಾನೆ. ಆ ಚಿಚ್ಛಕ್ತಿ ಮಾನವ ಹೃದಯದಲ್ಲಿ ಕರಿಯು ಕನ್ನಡಿಯುಲ್ಲಿ ಅಡಗಿದಂತೆ ಅಡ ಗಿರುತ್ತಾನೆ. ಕನ್ಯೆಯು ಸ್ನೇಹದಂತೆ, ಉದಕದೊಳಗೆ ಬಚ್ಚಿಟ್ಟ

ಬಯಕೆಯು ಕಿಚ್ಚಿನಂತೆ, ಶಶಿಯೊಳಗಣ ರಸದ ರುಚಿಯಂತೆ, ಪುಷ್ಪದೊಳಗಣ ಪರಿಮಳದಂತೆ ಮರೆಯಾಗಿ ನೆಲೆಸಿದೆ ಎಂದು ಶಿವಶರಣರು ನಂಬಿದರು. ಶಿವಾಗಮಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ, ಗೀತೆಯಲ್ಲಿಯೂ ಇದನ್ನು ಸ್ಪಷ್ಟವಾಗಿ ಹೇಳಿದೆ. ಈ ಲಿಂಗ ತತ್ವವನ್ನು ವೀರಶೈವದಲ್ಲಿ ಗುರು ಮತ್ತು ಜಂಗಮ ಶಿಷ್ಯಕೋಟಿಗೆ ಉಪದೇಶಿಸಲು ಸಮರ್ಥರಾಗಿದ್ದಾರೆ. ಈ ಲಿಂಗ ತತ್ವ ಸ್ವರೂಪವನ್ನು ಚನ್ನಬಸವಣ್ಣನವರು "ಬ್ರಹ್ಮ ತಲೆದೋರದಂದು, ವಿಷ್ಣು ಉದಯಿಸದಂದು, ರುದ್ರನವತರಿಸದಂದು, ಈರೇಳು ಭುವನನೆಲೆಗೊಳ್ಳದಂದು, ಸಪ್ತಸಾಗರಂಗಳುಕ್ಕಿ ಹರಿಯದಂದು, ಅಮೃತ ಮಥನವಿಲ್ಲದಂದು, ಮೂವತ್ತುಮೂರುಕೋಟಿ ದೇವರ್ಕಳಿಲ್ಲದಂದು, ಮುನ್ನಾರುಬಲ್ಲರು? ಆದಿಮೂಲಸ್ವಾಮಿ ಕೂಡಲ ಚನ್ನಸಂಗಯ್ಯ ಹುಟ್ಟಿಲ್ಲದಿರ್ದನಂದು"—ಎಂದು ಆ ಮಹಾಲಿಂಗದ ಸ್ವರೂಪವನ್ನು ಬೋಧಿಸಿದರು. ವೀರಶೈವ ಪ್ರಾಚೀನ ಆಚಾರ್ಯರಾದ ರೇಣುಕಾಚಾರ್ಯರೂ ಮರುಳಾರಾಧ್ಯರೂ, ಏಕೋರಾಮಾರಾಧ್ಯರೂ, ಪಂಡಿತಾರಾಧ್ಯರೂ ಮತ್ತು ವಿಶ್ವಾರಾಧ್ಯರೂ ಈ ಲಿಂಗ ತತ್ವವನ್ನು ಪ್ರಚಾರ ಮಾಡಿದ್ದರು. ಶ್ರೀಗುರು ಸಪ್ತವಿಧದೀಕ್ಷೆಯ ಸಂಸ್ಕಾರದಿಂದ "ಶಿಷ್ಯನಶಿರದರಮನೆಯ ಚಿತ್ಕಳೆಯನೆ ಇಷ್ಟಲಿಂಗವಾಗಿ ನೋಡಿ ಅಂಗದಲ್ಲಿ ಸಂಗಗೊಳಿಸಿದ ಬಳಿಕ, ಅದೇ ಪ್ರಾಣಲಿಂಗವೆಂದು ಅರಿದು ಸಾವಧಾನದಿಂದರ್ಚಿಸಬೇಕು. ಅದನಾವಾಗಲೂ ತನುವಿನಿಂದಗಲದಿರಬೇಕು" ಎಂದು ಶರಣ ಚನ್ನಬಸವಣ್ಣನವರು ವಿಧಿಸಿದರು.

ಈ ಗುರು ಮತ್ತು ಲಿಂಗ ತತ್ವಗಳಂತೆಯೇ ಜಂಗಮ ತತ್ವವೂ ಜೀವರಾಶಿಯ ಉದ್ಧಾರಕ್ಕೆ ನೆರವಾಗಬಲ್ಲುದು. ಶಿವಜ್ಞಾನಿಯೇ ಜಂಗಮ. ಭಕ್ತರಿಗೆ ಲಿಂಗಾಂಗಸಾಮರಸ್ಯ ತತ್ವವನ್ನು ತಿಳಿಸಿ,

ಅವರನ್ನು ಶಿವಪಥದಲ್ಲಿ ನಡೆಸಲು ಸಾಕ್ಷಾತ್ ಶಿವನೇ ಜಂಗಮ ರೂಪದಿಂದ ಬರುತ್ತಾನೆ. ಅವನು ನಿರಂಜನ; ನಿರ್ಲಿಪ್ತ; ನಿರಾಭಾರಿ. ಅವನು ಸಾಧಕರಲ್ಲಿ ಲಿಂಗನಿಷ್ಠೆ, ಶಿವಾನುಭಾವ ಸಂಪತ್ತು ಮತ್ತು ಕ್ರಿಯಾಜ್ಞಾನಗಳನ್ನು ಬೆಳೆಸಲು ಉಪದೇಶ ಮಾಡುತ್ತಾನೆ. ಜಂಗಮ ಎಂದರೆ ಜ್ಞಾನಭಾಸ್ಕರ! ಪರಮ ಶಿವಯೋಗಿ! ಜಂಗಮಪದ 'ಗಮ್–ಜ್ಞಾನೆ' ಎಂಬ ಧಾತು ವಿನಿಂದ ನಿಷ್ಪನ್ನವಾಗಿದೆ. ಪರವಸ್ತುವಿನ ಸಾಕ್ಷಾತ್ಕಾರ ಪಡೆದ ವ್ಯಕ್ತಿಗೆ ಜಂಗಮ ಎಂಬ ಹೆಸರು ರೂಢವಾಗಿದೆ. ಲಾಂಛನ ಗಳನ್ನು ಧರಿಸಿದ ಮಾತ್ರದಿಂದ ಜಂಗಮನಾಗಲಾರ. ಅದು ಪಾರಂಪರ್ಯವಾಗಿ ಬಂದ ಅಧಿಕಾರವಲ್ಲ. "ಲಕ್ಷಕ್ಕಾದರೂ ಒಬ್ಬ ಭಕ್ತನುಂಟು; ಕೋಟಿಗಾದರೂ ಒಬ್ಬ ಜಂಗಮವಿಲ್ಲ" ಎಂದು ಚನ್ನಬಸವಣ್ಣನವರು ಜಂಗಮದ ಅಭಾವವನ್ನು ಸೂಚಿ ಸಿದ್ದಾರೆ. ಈ ಗುರುಲಿಂಗ ಜಂಗಮತ್ರಯರಲ್ಲಿ ಲಿಂಗತತ್ವ ಗುರು ಮತ್ತು ಜಂಗಮತತ್ವದಲ್ಲಿಯೂ ಇದೆ ಲಿಂಗವಿಲ್ಲದೆ ಗುರುವಿಲ್ಲ; ಜಂಗಮವಿಲ್ಲ. ಲಿಂಗಕ್ಕೆ ಗುರು–ಜಂಗಮ ಎರಡುಮುಖ. ಇದನ್ನು ಚನ್ನಬಸವಣ್ಣನವರು "ಲಿಂಗದಿಂದಲಿ ಗುರು, ಲಿಂಗ ದಿಂದಲಿ ಜಂಗಮ, ಲಿಂಗದಿಂದಲಿ ಪಾದೋದಕ ಪ್ರಸಾದ, ಲಿಂಗ ದಿಂದಲಿ ಸರ್ವವೆಲ್ಲಾ ಆಯಿತ್ತು. ಅವು ನಮ್ಮ ಕರಸ್ಥಲದೊಳಗೆ ಇಲ್ಲನೆಂಬ ಸುರಾಭುಂಜಿಕರ ಮಾತ ಕೇಳಲಾಗದು" ಎಂಬ ವಚನ ದಲ್ಲಿ ಲಿಂಗತತ್ವದಲ್ಲಿಯೇ ಗುರು, ಜಂಗಮ, ಪಾದೋದಕ, ಪ್ರಸಾದ ಮೊದಲಾದ 'ಸರ್ವವೆಲ್ಲಾ ಆಯಿತ್ತು' ಎಂದು ಹೇಳಿ ದ್ದಾರೆ. ಈ 'ಸರ್ವವೆಲ್ಲಾ'—ಎಂಬ ಪದದಲ್ಲಿ ವಿಭೂತಿ, ರುದ್ರಾಕ್ಷಿ, ಮಂತ್ರತತ್ವಗಳು ಸೇರಿವೆಯೆಂದು ಧ್ವನಿತವಾಗುತ್ತದೆ. ಲಿಂಗ, ಗುರು, ಜಂಗಮ, ಪಾದೋದಕ, ಪ್ರಸಾದ, ವಿಭೂತಿ,

ರುದ್ರಾಕ್ಷಿ, ಮಂತ್ರ—ಈ ಅಷ್ಟಾವರಣಗಳಲ್ಲಿ ಲಿಂಗತತ್ವ ಕೇಂದ್ರ ಬಿಂದುವಿನಂತಿದೆ. ಲಿಂಗಾರ್ಚನೆಯಲ್ಲಿ ಲಿಂಗಾಭಿಷೇಕಜಲವೇ ಲಿಂಗಪಾದೋದಕವಾಗುತ್ತದೆ. ಲಿಂಗದಲ್ಲಿ ಗುರು–ಜಂಗಮ ಐಕ್ಯವಾಗಿರುವುದರಿಂದ ಅದು ಗುರುಪಾದೋದಕವಾಗುತ್ತದೆ. ಈ ಪಾದೋದಕದಿಂದ ಪಾಪ ಪರಿಹಾರವಾಗುತ್ತದೆ. ಇದು ಗುರು ಜಂಗಮರಿಗೂ ಅತ್ಯಾವಶ್ಯಕವೆಂದು ಶರಣರು ನಂಬಿದರು. ಪಾದೋದಕ ವಿಚಾರದಲ್ಲಿ ಒಮ್ಮತವಿದ್ದಂತೆ ಕಂಡುಬರುವುದಿಲ್ಲ. ಗುರು ಎಂದರೆ ಲಿಂಗ, ಜಂಗಮ ಸಮನ್ವಯ ; ಜಂಗಮ ಎಂದರೆ ಗುರು, ಲಿಂಗ ಸಮನ್ವಯ; ಲಿಂಗಾರ್ಪಿತ ಪದಾರ್ಥವನ್ನು ಪ್ರಸಾದವೆನ್ನುತ್ತಾರೆ. ಗುರುವಾಗಲಿ ಜಂಗಮವಾಗಲಿ ತಾನು ಬೋಧಿಸುವ, ಪದಾರ್ಥವನ್ನು ಲಿಂಗರೂಪನಿಗೆ ಸಮರ್ಪಿಸಿ, ಅನಂತರ ಭುಂಜಿಸಬೇಕು.

ಪ್ರಸಾದದಲ್ಲಿ ಶುದ್ಧ, ಸಿದ್ಧ, ಪ್ರಸಿದ್ಧ ಎಂದು ಮೂರು ರೀತಿ "ಪ್ರಸಾದೇಸರ್ವದುಃಖಾನಾಂ ಹಾನಿರಸ್ಯೋಪಜಾಯತೇ" ಎಂದು ಭಗವದ್ಗೀತೆ ಪ್ರಸಾದದ ಮಹಿಮೆಯನ್ನು ಪ್ರಶಂಸಿಸಿದೆ. ಪ್ರಸಾದ ದಿಂದ ಸಾಧಕನು ತನ್ನ ಅಹಂಕಾರ, ಮೋಹ, ಕೋಪ, ತಾಪ ಮೊದಲಾದ ದೇಹ ಗುಣಗಳನ್ನು ನೀಗಿಕೊಂಡು ಪ್ರಶಾಂತಚಿತ್ತ ನಾಗುತ್ತಾನೆ. ಭಕ್ತ ಭಕ್ತಿಯಿಂದ ಗುರು ಜಂಗಮರಿಗೆ ತನ್ನ ಪದಾರ್ಥವನ್ನು ನೀಡಿ ತೃಪ್ತಿಪಡಿಸುವುದರಿಂದ ಜಗತ್ತು ಆನಂದ ರೂಪವಾಗಿ ಪರಿಣಮಿಸುತ್ತದೆ. ಭಕ್ತನಿಗೆ ಅಷ್ಟಾವರಣದಲ್ಲಿ ವಿಭೂತಿ ಭೂಷಣಪ್ರಾಯವಾದುದು. ಪ್ರತಿದಿನವೂ ಸಾಧಕಜೀವಿ ಸ್ನಾನಮಾಡಿ ಶುಚೀಭೂರ್ತನಾಗಿ ಲಿಂಗಾರ್ಚನೆಯನ್ನು ನೆರವೇರಿ ಸಲು ಭಸ್ಮಧಾರಣೆಯಿಂದ ಪರಿಶುದ್ಧನಾಗುತ್ತಾನೆ. ಇದರಿಂದ ಚಿತ್ತಪ್ರಸನ್ನವಾಗುತ್ತದೆ ; ಹೃದಯ ಆನಂದಮಯವಾಗುತ್ತದೆ.

ಇದು ಸಕಲದುರಿತಗಳನ್ನೂ ನಾಶ ಮಾಡುತ್ತದೆ ಎಂಬ ನಂಬುಗೆ ವೀರಶೈವದಲ್ಲಿದೆ. ಪರಮೇಶ್ವರನ ಸೂರ್ಯ, ಚಂದ್ರ, ಅಗ್ನಿ ನೇತ್ರಗಳಿಂದ ತ್ರಿಪುರಸಂಹಾರ ಕಾಲದಲ್ಲಿ ಬಿದ್ದ ನೀರು ರುದ್ರಾಕ್ಷಿಯಾಯಿತೆಂದು ಪುರಾಣಗಳು ಹೇಳುತ್ತಿವೆ. ಈ ರುದ್ರಾಕ್ಷಿಯನ್ನು ಶಿವಭಕ್ತರು ಧರಿಸುವುದರಿಂದ ರುದ್ರಸದೃಶರಾಗುತ್ತಾರೆ. ಅವರು ಸಂಸಾರದುಃಖವನ್ನು ಜಯಿಸಿ ನಿರಂಜನ ಸ್ವರೂಪರಾಗುತ್ತಾರೆ. ಅಷ್ಟಾವರಣದಲ್ಲಿ ಮಂತ್ರ ಪರಮಪವಿತ್ರವಾದುದು. 'ಓಂ ನಮಃ ಶಿವಾಯ' ಎಂಬ ಪ್ರಣವಪಂಚಾಕ್ಷರೀ ಮಂತ್ರದಿಂದ ಶಿವನು ಸಂತುಷ್ಟನಾಗುತ್ತಾನೆ. ಗುರೂಪದಿಷ್ಟವಾದ ಈ ಮಂತ್ರವನ್ನು ಭಕ್ತಿಯಿಂದ ಜಪಿಸಿದರೆ ಸಾಧಕನಿಗೆ ಮುಕ್ತಿ ದೊರೆಯುತ್ತದೆ. ಈ ಮಂತ್ರ ಬಲದಿಂದ ಭಕ್ತ ಶಿವನೇ ಆಗುತ್ತಾನೆ. ವೀರಶೈವದ ಅಷ್ಟಾವರಣ, ಭಕ್ತನ ಆತ್ಮೋನ್ನತಿಯ ಸಾಧನವೆಂಬುದನ್ನು ಚನ್ನಬಸವಣ್ಣನವರು ವೇದ, ಶಿವಾಗಮ, ಉಪನಿಷತ್ತು, ಗೀತೆ ಮತ್ತು ಪುರಾತನರ ಉಪದೇಶ—ಮೊದಲಾದ ಪ್ರಮಾಣಗಳ ಆಧಾರದ ಮೇಲೆ 'ವಚನ' ವಾಣಿಯಲ್ಲಿ ಸಾರಿದರು. ಅವರನ್ನು ಶರಣರು 'ಷಟ್ಸ್ಥಲಸ್ಥಾಪನಾಚಾರ್ಯ' 'ಷಟ್ಸ್ಥಲ ಬ್ರಹ್ಮವಾದಿ' 'ಶಿವತತ್ತ್ವಾನುಭವಸಂಸಿದ್ಧ' 'ವೀರಶೈವಾಚಾರ್ಯ' 'ಸಮ್ಯಕಜ್ಞಾನಿ' ಎಂದು ಕೊಂಡಾಡಿದರು! ವೀರಶೈವಧರ್ಮ ಸಾಧನೆಗೆ ಅಷ್ಟಾವರಣದಂತೆ ಪಂಚಾಚಾರಗಳೂ ಸಪ್ತಾಚಾರಗಳೂ ಆವಶ್ಯಕವೆಂದು ಚನ್ನಬಸವಣ್ಣನವರು ಆಚಾರ ಪ್ರಭೇದಗಳನ್ನು ನಿರೂಪಿಸಿದರು. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಇವು ಪಂಚಾಚಾರಗಳು. ವೀರಶೈವಗುರು ಶಿವದೀಕ್ಷಾಸಂಸ್ಕಾರಪೂರ್ವಕವಾಗಿ ಅನುಗ್ರಹಿಸಿದ ಇಷ್ಟಲಿಂಗವನ್ನು ಮಾತ್ರವೇ ನಿಷ್ಠೆಯಿಂದ ಅರ್ಚಿಸುವುದೇ ಲಿಂಗಾಚಾರ. ಇತರ ದೇವತೆಗಳನ್ನು ಪೂಜಿಸಬಾರದು.

ಭಕ್ತನಾಗಲಿ, ಮಹೇಶ್ವರನಾಗಲಿ ಕಾಯಕದಿಂದ ಸಂಪಾದಿಸಿದ ಧನವನ್ನು ಲೋಕೋಪಕಾರಕ್ಕೆ ವಿನಿಯೋಗಿಸಬೇಕು. ಇದೇ ಸದಾಚಾರ. ಪಾಪಕಾರ್ಯಗಳಿಗೆ ಮನಸ್ಸು ಮಾಡಬಾರದು. ಶಿವಭಕ್ತರನ್ನು ಸಾಕ್ಷಾತ್ ಪರಶಿವಲಿಂಗವೆಂದೇ ಭಾವಿಸಿ ಅವರನ್ನು ಆದರಿಸಿ, ಗೌರವಿಸಿ ಅವರಿಗೆ ನೆರವಾಗುವುದೇ ಶಿವಾಚಾರ. ಶಿವಭಕ್ತರಲ್ಲಿ ಭೇದವನ್ನು ಎಣಿಸಬಾರದು. ಅಷ್ಟಾವರಣತತ್ವಗಳಿಗೆ ಅಪಚಾರವಾದರೆ, ಅಂಥ ಸ್ಥಳವನ್ನು ತ್ಯಜಿಸುವುದೇ ಗಣಾಚಾರ. ಶಿವಭಕ್ತರ ನಿಂದೆಯನ್ನು ಕೇಳಬಾರದು. ಭಕ್ತಿ ಜ್ಞಾನ ವೈರಾಗ್ಯ ಮತ್ತು ಅಷ್ಟಾವರಣಸಂಪನ್ನರಾದ ಶಿವಭಕ್ತರಲ್ಲಿ ಪಂಚಸೂತಕಗಳನ್ನು ಕಲ್ಪಿಸದೆ ಅವರಿಗೆ ವಿರುದ್ಧವಾಗಿ ವರ್ತಿಸದೆ ಸೇವಾಭಾವನೆಯಿಂದಿರುವುದೇ ಭೃತ್ಯಾಚಾರ. ಈ ಐದೂ ಶಿವಭಕ್ತರ ಬಹಿರಂಗಜೀವನದ ಶುದ್ಧಿಗೆ ಸಹಾಯಮಾಡುತ್ತವೆ.

ಇದರಂತೆಯೇ ಭಕ್ತನ ಅಂತರಂಗಶುದ್ಧಿಗೆ ಸಪ್ತಾಚಾರಗಳನ್ನು ಚನ್ನಬಸವಣ್ಣನವರು ಬೋಧಿಸಿದರು. ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ ಮತ್ತು ಸರ್ವಾಚಾರ ಈ ಏಳು ಆಚಾರಗಳನ್ನು ಭಕ್ತ, ಗುರು, ಜಂಗಮರೂ ಆಚರಿಸಬೇಕೆಂದು ವಿಧಿಸಿದರು. ನಿತ್ಯವೂ ಶುಚಿರ್ಭೂತನಾಗಿ ಅಷ್ಟಾವರಣವನ್ನು ಆಚರಿಸುತ್ತ ಇಷ್ಟಲಿಂಗಾರ್ಚನೆಯನ್ನು ಮಾಡಿ ಗುರುಲಿಂಗ ಜಂಗಮರ ಪಾದೋದಕವನ್ನು ಸ್ವೀಕರಿಸುವುದೇ ಕ್ರಿಯಾಚಾರ. ಇದು ಪ್ರತಿಯೊಬ್ಬ ಲಿಂಗಾಂಗಿಗೂ ಆವಶ್ಯಕವಾದ ಆಚಾರ. ಗುರುಹಿರಿಯರಲ್ಲಿ ಕುಂದುಕೊರತೆಗಳನ್ನು ಎಣಿಸದೆ, ಪಾತಕರ ಸಹವಾಸ ಮಾಡದೆ, ಸತ್ಯನಿಷ್ಠನಾಗಿ ನಡೆನುಡಿಯಲ್ಲಿ ಒಂದಾಗಿರುವುದೇ ಜ್ಞಾನಾಚಾರ. ಪ್ರತಿಯೊಬ್ಬರೂ ಶಿವಾನುಭಾವಿಯಾಗಿರಬೇಕು. ಕಾಮ, ಕ್ರೋಧ,

ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ತ್ಯಜಿಸಿ, ಸದ್ಗುಣ ಶಾಲಿಯಾಗಿರುವುದೇ ಭಾವಾಚಾರ. ಶಿವಭಕ್ತರು ತ್ರಿಕರಣ ಶುದ್ಧರಾಗಿರಬೇಕು. ಸುಳ್ಳು ಹೇಳದೆ, ಸತ್ಯಸಂಧರಾಗಿರುವುದೇ ಸತ್ಯಾಚಾರ. ಶಿವಭಕ್ತರು ಆಡಿದ ಮಾತಿಗೆ ತಪ್ಪಬಾರದು. ಲಿಂಗಾಣತಿಯಿಂದ ಬಂದೊದಗಿದುದನ್ನು ಶಿವಪ್ರಸಾದವೆಂದು ಅನುಭೋಗಿಸುವುದೇ ನಿತ್ಯಾಚಾರ. ವೀರಶೈವರು ಸುಖದುಃಖ ಗಳಲ್ಲಿ ಸಮಚಿತ್ತರಾಗಿರಬೇಕು. ಸರ್ವಾವಸ್ಥೆಯಲ್ಲಿಯೂ ಶಿವ ಧರ್ಮವನ್ನು ಪರಿಪಾಲಿಸುವುದೇ ಧರ್ಮಾಚಾರ. ಪರಮಾಚಾರ ಸಂಪನ್ನನಾಗಿ ದುರ್ಭಾವನೆ, ದುರಹಂಕಾರ, ಪರಹಿಂಸೆ ಮತ್ತು ಪಾಪಕರ್ಮಗಳಿಗೆ ಆಸ್ಪದವಿಲ್ಲದಂತೆ, ಗುರು ಲಿಂಗ ಜಂಗಮ ಸೇವೆಯಲ್ಲಿ ಮುಕ್ತನಾಗುವುದೇ ಸರ್ವಾಚಾರ.

ಶಿವಭಕ್ತರು ಶಿವೋऽಹಂಭಾವವನ್ನು ಸಾಧಿಸಬೇಕು. ಇದೇ ತತ್ವವನ್ನು ಚನ್ನಬಸವಣ್ಣನವರು "ಅಂಗ ಆಚಾರದಲ್ಲಿ ಸಂಗ ವಾಯಿತ್ತು; ಆಚಾರ ಪ್ರಾಣದಲ್ಲಿ ಸಂಗವಾಯಿತ್ತು; ಪ್ರಾಣ ಲಿಂಗದಲ್ಲಿ ಸಂಗವಾಯಿತ್ತು. ಪ್ರಾಣಕ್ಕೆ ಪ್ರಾಣವಾಗಿ ಉಭಯ ಪ್ರಾಣ ಕೂಡಲ ಚನ್ನಸಂಗಮದೇವಾ" ಎಂದು ಅರ್ಥಗರ್ಭಿತ ವಾಗಿ ಆಡಿದರು. ಈ ಸಾಧನೆಯ ವಿಕಾಸಕ್ರಮವೇ ಷಟ್ಸ್ಥಲ. ಈ ಷಟ್ಸ್ಥಲ ತತ್ತ್ವವಿಚಾರ ವಾತುಲ, ವೀರ, ಚಂದ್ರಜ್ಞಾನ, ಪಾರಮೇಶ್ವರ ಮೊದಲಾದ ಆಗಮಗಳಲ್ಲಿ ಉಕ್ತವಾಗಿದೆಯೆಂದು ಪಂಡಿತರು ಹೇಳಿದ್ದಾರೆ. ಈ ಅನೇಕ ಶಿವಾಗಮಗಳಲ್ಲಿ ಹೇಳಿರುವ ಷಟ್ಸ್ಥಲ ಕ್ರಮವನ್ನು ಚನ್ನಬಸವಣ್ಣನವರು ನಿರ್ಣಯಿಸಿದ ರೆಂದು ಅರ್ಥವಾಗುತ್ತದೆ. ಅವರಿಗಿಂತಲೂ ಹಿಂದೆಯೇ ಪೂರ್ವಾ ಚಾರ್ಯರು ಈ ತತ್ವವನ್ನು ಕುರಿತು ವಿವೇಚಿಸಿದ್ದರೆಂಬುದು ನಿಜ. ಅದನ್ನು ಚನ್ನಬಸವಣ್ಣನವರು ಸಂಸ್ಕರಿಸಿ ಪ್ರಕಾಶ

ಗೊಳಿಸಿದರು. ಸ್ಥಲ ಎಂದರೆ ಪರಬ್ರಹ್ಮ ಎಂದು ವೀರಶೈವರು ಪಾರಿಭಾಷಿಕವಾಗಿ ಭಾವಿಸಿರುತ್ತಾರೆ. ಭಕ್ತಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ– ಎಂದು ಆರು ಸ್ಥಲಗಳಿವೆ. ಇವು ಜೀವನ ವಿಕಾಸವನ್ನು ಸೂಚಿಸುವ ಆರು ಹಂತಗಳೆಂಬುದನ್ನು ನಿರ್ಣಯಿಸಿರುತ್ತಾರೆ.

ಈ ಆರು ಹಂತಗಳಲ್ಲಿ ಮೊದಲನೆಯದು ಭಕ್ತಸ್ಥಲ; ಚನ್ನಬಸವಣ್ಣನವರು ಈ ಸ್ಥಲದಲ್ಲಿ ಸಾಧಕನ ಲಕ್ಷಣವನ್ನು ಹೃದಯಂಗಮವಾಗಿ ಹೇಳಿದ್ದಾರೆ. "ಭಕ್ತ ಶಾಂತನಾಗಿರಬೇಕು; ತನ್ನ ಕುರಿತುಬಂದ ಠಾವಿನಲ್ಲಿ ಸತ್ಯವಾಗಿ ನುಡಿಯಬೇಕು; ಗುರು ಲಿಂಗಜಂಗಮನೆಡೆಯಲ್ಲಿ ನಿಂದೆಯಿಲ್ಲದಿರಬೇಕು. ಭೂತಹಿತವಹ ವಚನವ ನುಡಿಯಬೇಕು. ಸಕಲ ಪ್ರಾಣಿಗಳನ್ನು ತನ್ನಂತೆ ಕಾಣಬೇಕು. ತನುಮನಧನವ ಗುರುಲಿಂಗಜಂಗಮಕ್ಕೆ ಸವೆಸಬೇಕು. ಅಪಾತ್ರದಾನವ ಮಾಡಲಾಗದು; ಸಕಲೇಂದ್ರಿಯಂಗಳ ತನ್ನ ವಶವ ಮಾಡಬೇಕು; ಇದೇ ಮೊದಲಲ್ಲಿ ಬಾಹಶೌಚನೋಡಾ! ಲಿಂಗಪೂಜಿಸಿ ಪ್ರಸಾದವಪಡೆವಡೆ ಇದೇ ಸಾಧನ ಕೂಡಲಚನ್ನ ಸಂಗಮದೇವಾ" ಎಂಬ ಆವರ ಅಮೃತವಚನದಲ್ಲಿ ಭಕ್ತಸ್ಥಲದಲ್ಲಿ ಸಾಧಕನ ಮನೋಭಾವ ಹೇಗೆ ರೂಪುಗೊಳ್ಳಬೇಕೆಂಬುದನ್ನು ತಿಳಿಸಿರುತ್ತಾರೆ. ಭಕ್ತ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಬಿಟ್ಟು, ಸತ್ಯಸದಾಚಾರಸಂಪನ್ನನಾಗಿ ಇಷ್ಟಲಿಂಗಪೂಜೆಯನ್ನು ಶ್ರದ್ಧಾಭಕ್ತಿಯಿಂದ ನೆರವೇರಿಸುತ್ತ ಪರೋಪಕಾರನಿರತನಾಗಿರಬೇಕು. ಆದರಿಂದ ಭಕ್ತನ ಪೃಥ್ವೀಕಾಯ ಪ್ರಸಾದಕಾಯವಾಗುತ್ತದೆ. ಎರಡನೆಯದು; ಮಾಹೇಶ್ವರ ಸ್ಥಲ. ಇಲ್ಲಿ ಭಕ್ತನು ಮಹೇಶ್ವರನಾಗುತ್ತಾನೆ. ಆವನಲ್ಲಿ ನಿಷ್ಠಾಭಕ್ತಿ ನೆಲೆಗೊಳ್ಳುತ್ತದೆ. ಇಲ್ಲಿ ಜಲಭೂತ ಪ್ರಸಾದಕಾಯ

ವಾಗುತ್ತದೆ. ಅವನಲ್ಲಿ ಜ್ಞಾನಶಕ್ತಿ ನಿಷ್ಠಾಭಕ್ತಿ ಒಂದಾಗಿ ಲಿಂಗ ರೂಪವಾಗುತ್ತದೆ. ಅವನು ಅನ್ಯದೇವತಾ ಪೂಜೆಯನ್ನು ಮಾಡುವುದಿಲ್ಲ. ಶಿವನೇ ಅವನಿಗೆ ಆರಾಧ್ಯದೈವ. "ಶರ್ವಜಾತನ ಕಳೆದು ಶ್ರೀಗುರು ಲಿಂಗವು ಪುಣ್ಯಜಾತನಮಾಡಿದಬಳಿಕ, ಆತನಿಗೆ ಶಿವಕುಲವಲ್ಲದೆ ಬೇರೆ ಮತ್ತೊಂದು ಕುಲವುಂಟೆ? "ಮಾತಾ ಗೌರೀ ಪಿತಾ ರುದ್ರಃಐಶ್ವರಂ ಕುಲಮೇವ ಚ। ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಂ॥" ಎಂಬುದಾಗಿ ಕೂಡಲಚನ್ನ ಸಂಗಯ್ಯಾ ನಿಮ್ಮ ಮಾಹೇಶ್ವರರ ಕುಲಕ್ಕೆ ಪ್ರತಿಯ ಕಾಣೆ"—ಎಂದು ಚನ್ನಬಸವಣ್ಣನವರು ಮಾಹೇಶ್ವರ ಸ್ಥಿತಿಯನ್ನು ವಿವರಿಸಿರುತ್ತಾರೆ. ಮಾಹೇಶ್ವರಸ್ಥಲದಲ್ಲಿ ಸಾಧಕನ ಬುದ್ಧಿ ಸುಬುದ್ಧಿಯಾಗುತ್ತದೆ; ರಸಪದಾರ್ಥ ಪ್ರಸಾದವಾಗುತ್ತದೆ. ಅವನು ಪ್ರಸಾದಿಯಾಗುತ್ತಾನೆ. ಮೂರನೆಯದು ಪ್ರಸಾದಿಸ್ಥಲ: ಇಲ್ಲಿ ಸಾಧಕನ ನಿಷ್ಠಾಭಕ್ತಿ ಅವಧಾನಭಕ್ತಿಯಾಗುತ್ತದೆ. ನೇತ್ರೇಂದ್ರಿಯದಲ್ಲಿರುವ ಇಚ್ಛಾಶಕ್ತಿ ಸಹಿತವಾದ ಶಿವಲಿಂಗದ ಆರಾಧನೆಯಿಂದ ಅಹಂಕಾರ ಅಳಿದು ನಿರಹಂಕಾರಭಾವ ಮೂಡು ತ್ತದೆ. ಇಲ್ಲಿ ಅಗ್ನಿತತ್ವ ಪ್ರಸಾದಕಾಯವಾಗುತ್ತದೆ. "ಗುರುವಿ ನಲ್ಲಿ ಭಕ್ತಿ, ಲಿಂಗದಲ್ಲಿ ನಿಷ್ಠೆ, ಜಂಗಮದಲ್ಲಿ ಸುಯಿಧಾನ, ಅರ್ಪಿತ ದಲ್ಲಿ ಅವಧಾನ, ಪ್ರಸಾದದಲ್ಲಿ ಪರಿಣಾಮ, ಇಂತೆಂದುದು ಕೂಡಲಚನ್ನಸಂಗಯ್ಯನ ವಚನ" ಎಂದೂ, "ಜಿಹ್ವೆಗುರು, ಕಂಗಳುಲಿಂಗ, ನಾಸಿಕವಾಚಾರ, ಶ್ರೋತ್ರಪ್ರಸಾದ, ಹಸ್ತ ಜಂಗಮ, ಭಾವಮಹಾಲಿಂಗ, ಕೂಡಲಚನ್ನಸಂಗಯ್ಯಾ ನಿಮ್ಮ ಶರಣಸರ್ವಾಂಗಪ್ರಸಾದಿ"—ಎಂದೂ ಚನ್ನಬಸವಣ್ಣನವರು ಪ್ರಸಾದಿಸ್ಥಲದ ಸ್ವರೂಪವನ್ನು ಸರಳವಾದ ಮಾತುಗಳಲ್ಲಿ ಬೋಧಿಸಿರುತ್ತಾರೆ. ಪರಮಾತ್ಮಸೃಷ್ಟಿಯಲ್ಲಿ ಎಲ್ಲ ವಸ್ತುಗಳೂ

ಪರಮಾತ್ಮನ ಸೇವೆಗಾಗಿಯೇ ನಿರ್ಮಿತವಾಗಿವೆ. ಜೀವನು ಅವನ್ನು ತನ್ನವೆಂದು ಭಾವಿಸಲಾಗದು. ಎಲ್ಲವನ್ನೂ ಪರಮಾತ್ಮನಿಗೆ ಅರ್ಪಿಸಿ, ತಾನು ಆ ಪ್ರಸಾದವನ್ನು ಭೋಗಿಸಬೇಕು. ಇದರಿಂದ ಚಿತ್ತ ಪ್ರಸನ್ನವಾಗುತ್ತದೆ. ನಾಲ್ಕನೆಯದು ಪ್ರಾಣಲಿಂಗಿಸ್ಥಲ: ಈ ಸ್ಥಲದಲ್ಲಿ ಲಿಂಗವೇ ಪ್ರಾಣ; ಪ್ರಾಣವೇ ಲಿಂಗ ಎಂಬಂತೆ ಭಕ್ತ ಪ್ರಾಣಲಿಂಗಿಯಾಗುತ್ತಾನೆ. ಇಲ್ಲಿ ಚರ್ಮೇಂದ್ರಿಯದ ಆದಿಶಕ್ತಿಸಹಿತವಾದ ಜಂಗಮಲಿಂಗವನ್ನು ಸಾಧಕ ಅನುಭಾವ ಭಕ್ತಿಯಿಂದ ಆರಾಧಿಸುತ್ತಾನೆ. ಇಲ್ಲಿ ವಾಯು ಕಾಯು ಪ್ರಸಾದಕಾಯುವಾಗುತ್ತದೆ; ಮನಸ್ಸು ಸುಮನಸ್ಸಾಗುತ್ತದೆ. ಪ್ರಾಣಲಿಂಗಿಯೆಂದರೆ ಪರಮಶಿವಜ್ಞಾನಸ್ವರೂಪಿ. ನೆಲ, ನೀರು, ಗಾಳಿ, ಬೆಂಕಿ, ಬಾನುಗಳೆಂಬ ಪಂಚಭೂತಗಳಲ್ಲಿಯೂ ಮಹಾಲಿಂಗತೇಜಸ್ಸು ಸ್ಫುರಿಸುತ್ತದೆ. ಪಂಚಭೂತತತ್ವಗಳಲ್ಲಿ ಪಂಚಮುಖಲಿಂಗ ಪ್ರತಿಷ್ಠೆಯಾದಂತೆ! ಮನ ಬುದ್ಧಿ ಚಿತ್ತ ಅಹಂಕಾರ ಎಂಬ ಅಂತಃಕರಣ ಚತುಷ್ಟಯಗಳಲ್ಲಿ ಚತುರ್ಮುಖಲಿಂಗ ನೆಲೆಗೊಂಡಂತೆ! ಶ್ರೋತ್ರ, ನೇತ್ರ, ಘ್ರಾಣ, ತ್ವಕ್ಕು, ಜಿಹ್ವೆ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯಗಳೆಂಬ ದಶೇಂದ್ರಿಯಗಳಲ್ಲಿ ದಶಮುಖಲಿಂಗ ಪ್ರಸನ್ನವಾದಂತೆ! ಪ್ರಾಣಲಿಂಗಿ ಆಗ ಅಂತರ್ಬಾಹ್ಯರಹಿತನಾಗುತ್ತಾನೆ. ಈ ಪರಿಸ್ಥಿತಿಯನ್ನು ಚನ್ನಬಸವಣ್ಣನವರು "ಕಾಯಲಿಂಗವಮುಟ್ಟಿದಡೆ ಕಾಯಲಿಂಗಭಕ್ತನಾಗಿರಬೇಕು. ನಯನಲಿಂಗವ ಮುಟ್ಟಿದಡೆ ನಯನಲಿಂಗಭಕ್ತನಾಗಿರಬೇಕು. ಶ್ರೋತ್ರಲಿಂಗವ ಮುಟ್ಟಿದಡೆ ಶ್ರೋತ್ರಲಿಂಗ ಭಕ್ತನಾಗಿರಬೇಕು. ಘ್ರಾಣಲಿಂಗವ ಮುಟ್ಟಿದಡೆ ಘ್ರಾಣಲಿಂಗ ಭಕ್ತನಾಗಿರಬೇಕು. ಜಿಹ್ವೆಲಿಂಗವ ಮುಟ್ಟಿದಡೆ ಜಿಹ್ವೆಲಿಂಗಭಕ್ತನಾಗಿರಬೇಕು. ಭಾವಲಿಂಗವ ಮುಟ್ಟಿದಡೆ ಭಾವಲಿಂಗಭಕ್ತ

ನಾಗಿರಬೇಕು. ಇದು ಕಾರಣ, ಕೂಡಲ ಚನ್ನಸಂಗಯ್ಯಾ, ನಿಮ್ಮ ಶರಣ ಸರ್ವಜೀವ ದಯಾಪಾರಿಯಾಗಿರಬೇಕು "–ಎಂದು ಲಿಂಗ ನೈಚ್ಛ್ಯವಂತೆ ಸಾರಿದ್ದಾರೆ. ಸಾಧಕ ಶರಣ ಸ್ಥಲದಲ್ಲಿ ಪೂರ್ಣ ಸ್ಥಿತಪ್ರಜ್ಞಾವಂತನಾಗಲು ಇಲ್ಲಿ ಸಿದ್ಧವಾಗುತ್ತಾನೆ. ಐದನೆಯ ಸ್ಥಲವೇ ಶರಣಸ್ಥಲ: ಇಲ್ಲಿ ಸಾಧಕ ಶ್ರೋತ್ರೇಂದ್ರಿಯದಲ್ಲಿರುವ ಪ್ರಸಾದಲಿಂಗವನ್ನು ಆನಂದ ಭಕ್ತಿಯಿಂದ ಪೂಜಿಸುತ್ತಾನೆ. ಆಕಾಶ ಪದಾರ್ಥಕಾಯ ಪ್ರಸಾದಕಾಯವಾಗುತ್ತದೆ. ಲಿಂಗಪತಿ ಶರಣಸತಿ ಭಾವ ಮೂಡುತ್ತದೆ. ಜ್ಞಾನ ಸುಜ್ಞಾನವಾಗುತ್ತದೆ. ಸದ್ಭಾವ ಹಸ್ತದಿಂದ ತೃಪ್ತಿಪದಾರ್ಥ ಮನೋಮುಖದಿಂದ ಲಿಂಗಾರ್ಪಿತವಾಗುತ್ತದೆ. ಚನ್ನಬಸವಣ್ಣನವರು ಶರಣಸ್ಥಲದಲ್ಲಿ—"ಶರಣಂಗಾಕಾಶವೇ ಲಿಂಗ; ಆ ಲಿಂಗಕ್ಕೆ ಸುಜ್ಞಾನವೆ ಹಸ್ತ; ಆ ಹಸ್ತಕ್ಕೆ ಶಿವಸಾದಾಖ್ಯ; ಆ ಸಾದಾಖ್ಯಕ್ಕೆ ಪರಾಶಕ್ತಿ; ಆ ಶಕ್ತಿಗೆ ಪ್ರಸಾದಲಿಂಗ; ಆ ಲಿಂಗಕ್ಕೆ ಶಾಂತ್ಯತೀತಕಳೆ; ಆ ಕಳೆಗೆ ಶ್ರೋತ್ರೇಂದ್ರಿಯವೆ ಮುಖ. ಆ ಮುಖಕ್ಕೆ ಸುಶಬ್ದ ದ್ರವ್ಯಂಗಳನು, ರೂಪು ರುಚಿ ತೃಪ್ತಿಯನರಿದು ಆನಂದ ಭಕ್ತಿಯಿಂ ದರ್ಪಿಸಿ, ಆ ಸುಶಬ್ದ ಪ್ರಸಾದವ ಭೋಗಿಸಿ ಸುಖಿಸುತ್ತಿಹನು. ಕೂಡಲಚನ್ನಸಂಗಾ, ನಿಮ್ಮ ಶರಣ"–ಎಂದು ನಿರ್ದುಷ್ಟವಾಗಿ ಹೇಳಿದ್ದಾರೆ. ಈ ಸ್ಥಿತಿಯಲ್ಲಿ ಶರಣನು ಲಿಂಗದಲ್ಲಿ ಬೆರೆತು ಶಿವಾನಂದವನ್ನು ಅನುಭವಿಸುತ್ತಾನೆ. ಅವನು ಕಿವಿಯಿಂದ ಕೇಳುವುದೆಲ್ಲವೂ ಶಿವಪ್ರಸಾದವೇ ಆಗಿರುತ್ತದೆ. ಇಲ್ಲಿ ಆತ್ಮಾರ್ಪಣ ಮನೋಭಾವ ಬರುತ್ತದೆ. ಆರನೆಯ ಸ್ಥಲವೇ ಐಕ್ಯಸ್ಥಲ: ಶರಣಸ್ಥಿತಿಯಿಂದ ಮುಂದೆ ಈ ಲಿಂಗ ಐಕ್ಯಸ್ಥಲದಲ್ಲಿ ನಿಲ್ಲುತ್ತಾನೆ ಇಲ್ಲಿ ತೃಪ್ತಿ ಪದಾರ್ಥವನ್ನು ಸಮರಸಭಕ್ತಿಯಿಂದ ಮಹಾಲಿಂಗಕ್ಕೆ ಅರ್ಪಿಸಿ, ಆ ತೃಪ್ತಿ ಪ್ರಸಾದವನ್ನು ತಾನು ಭೋಗಿಸುತ್ತ

'ಐಕ್ಯ'—ಸ್ಥಿತಿಯಲ್ಲಿರುತ್ತಾನೆ. ಆಕಾಶಕಾಯ ಲಿಂಗಕಾಯ ವಾಗುತ್ತದೆ. ಚನ್ನಬಸವಣ್ಣನವರು ಐಕ್ಯಸ್ಥಲದ ಸ್ವರೂಪವನ್ನು ಹೀಗೆ ವಿವೇಚಿಸಿ ಹೇಳಿರುತ್ತಾರೆ.

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ—ಎಂಬ ಆರು ಸ್ಥಲಗಳಲ್ಲಿ ಭಕ್ತ ಮಹೇಶ ಈ ಎರಡು ಗುರು ಸ್ಥಲ ವೆಂತಲೂ ಪ್ರಸಾದಿ ಪ್ರಾಣಲಿಂಗಿ ಈ ಎರಡೂ ಲಿಂಗಸ್ಥಲ ವೆಂತಲೂ, ಶರಣ, ಐಕ್ಯ ಈ ಎರಡೂ ಜಂಗಮಸ್ಥಲವೆಂತಲೂ ಅವರು ವಿಂಗಡಿಸಿದರು. ಭಕ್ತನಿಗೆ ಭೂಮಿಯೇ ಲಿಂಗ; ಮಾಹೇಶ್ವರನಿಗೆ ಜಲವೇ ಲಿಂಗ; ಪ್ರಸಾದಿಗೆ ಅಗ್ನಿಯೇ ಲಿಂಗ; ಪ್ರಾಣಲಿಂಗಿಗೆ ವಾಯುವೇ ಲಿಂಗ; ಶರಣನಿಗೆ ಆಕಾಶವೇ ಲಿಂಗ; ಐಕ್ಯನಿಗೆ ಆತ್ಮವೇ ಲಿಂಗ; ಭಕ್ತನಿಗೆ ಸುಚಿತ್ತಹಸ್ತ, ಆಚಾರ ಲಿಂಗ; ಮಾಹೇಶ್ವರನಿಗ ಸುಬುದ್ಧಿ ಹಸ್ತ, ಗುರುಲಿಂಗ; ಪ್ರಸಾದಿಗೆ ನಿರಹಂಕಾರಹಸ್ತ, ಶಿವಲಿಂಗ; ಪ್ರಾಣಲಿಂಗಿಗೆ ಸುಮನಹಸ್ತ, ಚರಲಿಂಗ; ಶರಣನಿಗೆ ಸುಜ್ಞಾನಹಸ್ತ, ಪ್ರಸಾದಲಿಂಗ; ಐಕ್ಯನಿಗೆ ಸದ್ಭಾವಹಸ್ತ, ಮಹಾಲಿಂಗ; ಈ ಲಿಂಗಮುಖಗಳೆಂದರೆ ಅನುಕ್ರಮವಾಗಿ ನಾಸಿಕ, ಜಿಹ್ವೆ, ನೇತ್ರ, ಚರ್ಮ, ಶ್ರೋತ್ರ, ನಿರ್ಭಾವಗಳು; ಇವುಗಳಿಗೆ ಗಂಧ, ರುಚಿ, ರೂಪ, ಸ್ಪರ್ಶ, ಶಬ್ದ, ನಿರ್ಮಯಲು ಅರ್ಪಿತವಾಗುತ್ತವೆ. ಇಲ್ಲಿ ಜಡದೇಹ ಧರ್ಮಭಾವಗಳೆಲ್ಲಾ ಅಳಿದುಹೋಗುತ್ತವೆ. ಇದು ಷಟ್ಸ್ಥಲದ ವಿಕಾಸವಾದ. ಪ್ರತಿಯೊಂದು ಸ್ಥಲದಲ್ಲಿಯೂ ಷಟ್ಸ್ಥಲಬ್ರಹ್ಮಿಯಾಗಿರಬೇಕು ಎಂದು ಚನ್ನಬಸವಣ್ಣನವರು ನೂತನ ಸಿದ್ಧಾಂತವನ್ನು ಸ್ಥಾಪಿಸಿದರು. ಪರಬ್ರಹ್ಮ ಸ್ವರೂಪ ವನ್ನು ಶಿವಾಗಮಗಳಲ್ಲಿ ನಿಷ್ಕಲ, ಸಕಲನಿಷ್ಕಲ, ಸಕಲ ಎಂದು ಮೂರು ರೀತಿಯಲ್ಲಿ ಹೇಳಿದೆ. ವಚನಋಷಿಗಳು ಆ ಪರಬ್ರಹ್ಮ

ವನ್ನು ಶೂನ್ಯ, ನಿಶ್ಶೂನ್ಯ, ಸರ್ವಶೂನ್ಯ ಎಂದು ಕರೆದರು. ಇದು ಶರಣರ ನವನೂತನ ಕಲ್ಪನೆ. ಶರಣರು ನಿರಾಕಾರಸ್ಥಿತಿಯನ್ನು ಆರಾಧಿಸಿದರು. ಈ ಷಟ್ಸ್ಥಲವನ್ನು ಪರಿಷ್ಕರಿಸಿ ನಿರೂಪಿಸಿದ ಮಹಾಚಾರ್ಯನೇ ಚನ್ನಬಸವಣ್ಣ! ಷಟ್ಸ್ಥಲ ಸಿದ್ಧಾಂತದಲ್ಲಿ ಉದಾರಮನೋಭಾವ ತುಂಬಿದೆ. ಅದನ್ನೇ ಚನ್ನಬಸವಣ್ಣನವರು ಸಮಾಜಕ್ಕೆ ಬೋಧಿಸಿದರು. "ಮೆಲ್ಲ ಮೆಲ್ಲನೆ ಭಕ್ತ, ಮೆಲ್ಲ ಮೆಲ್ಲನೆ ಮಾಹೇಶ್ವರ; ಮೆಲ್ಲ ಮೆಲ್ಲನೆ ಪ್ರಸಾದಿ, ಮೆಲ್ಲ ಮೆಲ್ಲನೆ ಪ್ರಾಣಲಿಂಗಿ; ಮೆಲ್ಲ ಮೆಲ್ಲನೆ ಶರಣ, ಮೆಲ್ಲ ಮೆಲ್ಲನೆ ಐಕ್ಯರಾದೆವೆಂಬರು ನಿಮ್ಮ ಶರಣರು. ತಾವೇನು ಮರುಜೀವಣಿಯ ಕೊಂಡರೇ? ಅಮೃತಸೇವನೆಯ ಮಾಡಿದರೇ! ಆವಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗಡಿರ್ದಡೆ, ಆ ಭಕ್ತಿಯು ಬಾಯಲ್ಲಿ ಹುಡಿಹೊಯ್ಯನೆ ಕೂಡಲಚನ್ನ ಸಂಗಮದೇವಾ" ಎಂಬುದು ಚನ್ನಬಸವಣ್ಣನವರ ಅಭಿಮತ. ಎಲ್ಲ ಹಂತದಲ್ಲಿಯೂ ಸಮಗ್ರ ಷಟ್ಸ್ಥಲ ಮನೋಭಾವ ವಿಕಾಸವಾಗುತ್ತಿರಬೇಕೆಂಬುದೇ ಪರಿಪೂರ್ಣದೃಷ್ಟಿ! ಅದರಿಂದ ಈ ಜೀವ ದೇಹ ಧರಿಸಿರುವಾಗಲೇ ಶಿವನಾಗುತ್ತಾನೆ. ಇದೇ ಲಿಂಗಾಂಗ ಸಾಮರಸ್ಯ! ಇದೇ ಜೀವನ್ಮುಕ್ತಿ!

ಶರಣಯುಗದಲ್ಲಿ ಬಸವಣ್ಣನವರು ಸಮತಾವಾದವನ್ನು ಬೋಧಿಸಿ, ಆ ತತ್ವಗಳನ್ನು ಆಚರಣೆಯಲ್ಲಿ ತಂದರು. ಚನ್ನಬಸವಣ್ಣನವರು ಆ ನೂತನ ಸಮಾಜದ ಓರೆಕೋರೆಗಳನ್ನು ತಿದ್ದಿ, ನಿರ್ದಾಕ್ಷಿಣ್ಯವಾಗಿ ಖಂಡಿಸಿ, ಮಂಡಿಸಿ, ಅದು ಸರ್ವಾಂಗ ಸುಂದರವಾಗಿರುವಂತೆ ನಿರೂಪಿಸಿದರು. ಆ ಸಮಾಜದಲ್ಲಿ ಅನೇಕರು ಕೀಳುಕುಲದವರಿದ್ದರು. ಅವರು ಶಿವಜ್ಞಾನ ಪರಿಪೂರ್ಣರಾಗಿದ್ದರು. ಶರಣಧರ್ಮದಲ್ಲಿ ಶಿವಭಕ್ತರೆಲ್ಲಾ ಸಮಾನರು.

'ಹಾರುವ ಮೊದಲು ಅಂತ್ಯಜ ಕಡೆಯಾಗಿ ಅಂಗದ ಮೇಲೆ ಲಿಂಗವಿದ್ದವರೆಲ್ಲ ಒಂದೇ' ಎಂಬ ಧರ್ಮ ಸೂತ್ರದಲ್ಲಿ ಒಬ್ಬೊಬ್ಬ ಶರಣನೂ ಶರಣೆಯೂ ಒಂದೊಂದು ನಿರ್ಮಲಮೌಕ್ತಿಕ ದಂತಿದ್ದರು. ಸಮಾಜದಲ್ಲಿ ಇಂಥ ನೂತನ ಕ್ರಾಂತಿ; ಉಜ್ವಲ ಕಾಂತಿ ಏಕಕಾಲದಲ್ಲಿಯೇ ಹೊಳೆದುವು. ಅಲ್ಲಮರು ಕಲ್ಯಾಣ ದಿಂದ ದೇಶಪರ್ಯಟನಾರ್ಥವಾಗಿ ಹೊರಟು, ಪುನಃ ಹನ್ನೆರಡು ವರ್ಷಗಳಿಗೆ ಕಲ್ಯಾಣಕ್ಕೆ ಬರುವುದಾಗಿ ತಿಳಿಸಿ, ಎಲ್ಲ ಶರಣರನ್ನೂ ಹರಸಿದರು. ಆ ತರುವಾಯ ಅನುಭವಮಂಟಪದಲ್ಲಿ ಎಲ್ಲ ಶರಣಸಂಗೋಷ್ಠಿಗಳೂ ಚನ್ನಬಸವಣ್ಣನವರ ನೇತೃತ್ವದಲ್ಲಿಯೇ ನಡೆಯುತ್ತಿದ್ದುವು. ಅಲ್ಲಮರು ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೂ, ಪಶ್ಚಿಮ ಕರಾವಳಿಯಿಂದ ಪೂರ್ವ ಕರಾವಳಿಯವರೆಗೂ ಸಂಚರಿಸಿ ವೀರಶೈವ ಧರ್ಮವನ್ನು ಉದ್ಧರಿಸಿದರು. ಅವರು ಹಿಮವತ್ಕೇದಾರದಲ್ಲಿ ಶೂನ್ಯಚಿಂತನೆಯಲ್ಲಿ ಸಮಾಧಿಮಗ್ನರಾಗಿ ಅನೇಕಕಾಲವಿದ್ದರು. ಬಸವಣ್ಣನವರು ಶೂನ್ಯಸಿಂಹಾಸನವನ್ನು ರಚಿಸಿಕೊಂಡು ಪ್ರಭುದೇವರ ಆಗಮನವನ್ನು ನಿರೀಕ್ಷಿಸುತ್ತಿದ್ದರು.

೯

ಬಸವಣ್ಣನವರು ಪರಿಶುದ್ಧಾತ್ಮರು. ಅವರು ಸಂಕಲ್ಪ ಮಾತ್ರದಿಂದಲೇ ತಮ್ಮ ಕಾಮನೆಯನ್ನು ಸಾಧಿಸಬಲ್ಲ ಮಹಾಂತ ರಾಗಿದ್ದರು. ಅವರು ಶೂನ್ಯಸಿಂಹಾಸನವನ್ನು ತಮ್ಮ ಹೃದಯ ಶಿವಾನುಭವಮಂಟಪದಲ್ಲಿ ರೂಪುಗೊಳಿಸಿದರು. ಅದೊಂದು ತತ್ವಪ್ರತಿಮೆ. ಶೂನ್ಯ ತತ್ವದಂತೆಯೇ ಶೂನ್ಯ ಸಿಂಹಾಸನವೂ ಐಕ್ಯಸ್ಥಲದ ಔನ್ನತ್ಯದ ಸಂಕೇತ! ಅದೊಂದು ಸಿದ್ಧಸ್ಥಲ! ನಿರಂಜನಸ್ಥಿತಿಯ ನೆಲೆ! ಅದು ಭೌತಸ್ವರೂಪವಲ್ಲ; ಅದು

ಕೇವಲ ಭಾವನಾಸಿಂಹಾಸನ! ಅದು ಪರಮನಿರಂಜನ ಸ್ಥಿತಿಯ ಮಣಿಪೀಠ! ಅಲ್ಲಮರಂಥ ಯೋಗಸಿದ್ಧರು ಮಂಡಿಸಬಲ್ಲ ಜ್ಞಾನ ಜ್ಯೋತಿರಾಸನ! ಈ ಶೂನ್ಯಸಿಂಹಾಸನವನ್ನು ಕಣ್ಣು ಅರಿಯಲಾರದು; ಮಾತು ಬಣ್ಣಿಸಲಾರದು; ಕೈ ಸೋಂಕಲಾರದು; ಮೂಗು ಆಘ್ರಾಣಿಸಲಾರದು; ಕಿವಿ ಕೇಳಲಾರದು; ಅದು ಶಿಲ್ಪಿಮುಟ್ಟದ ಸಿಂಹಾಸನ! ಅದು ನೆಲದ ಮೇಲಿಟ್ಟಿರುವುದಲ್ಲ! ಅದು ವ್ಯೋಮಾಧಾರವಾದುದು! ಅಂಥ ಶೂನ್ಯಸಿಂಹಾಸನದಲ್ಲಿ ಮಂಡಿಸಬಲ್ಲ ಮಹಾನಿರಂಜನ ಮೂರ್ತಿಯೆಂದರೆ ಕೇವಲಜ್ಞಾನಿ ಅಲ್ಲಮರೊಬ್ಬರೇ! ಅವರ ತರುವಾಯ ಶೂನ್ಯಸಿಂಹಾಸನಾರೋಹಣ ಸಂಪ್ರದಾಯಬದ್ಧವಾಯಿತಷ್ಟೆ! ವಿಚಾರ ಮರೆಯಾಯಿತು; ಆಚಾರ ತಲೆದೋರಿತು ತತ್ವ ಲಯವಾಯಿತು; ತತ್ವಛಾಯೆ ಸುಳಿಯಿತು! ಹಡಪದ ಅಪ್ಪಣ್ಣರು ಆ ಶೂನ್ಯ ಸಿಂಹಾಸನದ ರಚನೆಯನ್ನು ತಾತ್ವಿಕದೃಷ್ಟಿಯಿಂದ ಪರಿಭಾವಿಸಿ, ಮನೋಜ್ಞವಾಗಿ ತಿಳಿಸಿರುತ್ತಾರೆ. ಕವಿ ಸಿಂಗಿರಾಜ, ಕವಿ ಚಾಮರಸ ಮತ್ತು ಕವಿ ವಿರೂಪಾಕ್ಷಪಂಡಿತ ಮೊದಲಾದವರೂ ತಮ್ಮ ಕವಿವಾಣಿಯಲ್ಲಿ ಶೂನ್ಯಸಿಂಹಾಸನದ ರಚನೆಯನ್ನು ನಿರೂಪಿಸಿರುತ್ತಾರೆ. ಶೂನ್ಯತತ್ವವನ್ನು ಎಂದರೆ ನಿರಾಕಾರವಸ್ತು ಸ್ಥಿತಿಯನ್ನು, ಸಾಕಾರವಸ್ತುಸ್ಥಿತಿಯಲ್ಲಿ ಆರಾಧಿಸುವಂತೆ, ಆಧ್ಯಾತ್ಮಿಕ ಶೂನ್ಯಸಿಂಹಾಸನವನ್ನು ಕಾಲಕ್ರಮದಲ್ಲಿ ಭೌತ ರೂಪದಿಂದ ಕಲ್ಪಿಸಿಕೊಂಡಿರಬೇಕು.

ಹನ್ನೆರಡು ವರ್ಷಗಳಾದ ಮೇಲೆ ಅಲ್ಲಮರು ಪುನಃ ಕಲ್ಯಾಣಕ್ಕೆ ಬಂದರು. ಬಸವಣ್ಣನವರು ಸಕಲ ಶರಣಗಣದೊಂದಿಗೆ ಅವರನ್ನು ಭಕ್ತಿಯಿಂದ ಎದುರುಗೊಂಡು ಅವರನ್ನು ಗೌರವಿಸಿದರು. ಅಲ್ಲಮರು ಕಲ್ಯಾಣದಲ್ಲಿ ಬಸವಣ್ಣನವರ ಮಹಾಮನೆಯ

ಅನುಭವಮಂಟಪದಲ್ಲಿ ಶೂನ್ಯಸಿಂಹಾಸನವನ್ನು ಆರೋಹಣ ಮಾಡಿದನು! ಅದು ಶಿವಾನುಭವಪಟ್ಟ! ಅದು ಶರಣ ಸಂಗೋಷ್ಠಿಯ ಅಧ್ಯಕ್ಷಪೀಠ! ಅಲ್ಲಮರು ಕೆಲವು ಕಾಲ ಕಲ್ಯಾಣ ದಲ್ಲಿದ್ದು, ಶೂನ್ಯ ಸಿಂಹಾಸನದಲ್ಲಿ ಮಂಡಿಸಿ, ಸಕಲ ಶರಣರಿಗೆ ಶಿವ ಮಾರ್ಗವನ್ನು ತಿಳಿಸಿದರು. ಅನಂತರ ಅವರು ಶ್ರೀಶೈಲದತ್ತ ನಡೆದರು. ಅವರು ಶ್ರೀಶೈಲದಲ್ಲಿ ಕದಳಿ ವನದಲ್ಲಿ ಶಿವಯೋಗಾ ನಂದ ಸಮಾಧಿಯಲ್ಲಿದ್ದು ನಿಶ್ಶೂನ್ಯ ಲಿಂಗದಲ್ಲಿ ಲೀನರಾದರು! ಅವರು ಶೂನ್ಯ ಸಿಂಹಾಸನದ ಮೊದಲನೆಯ ಪಟ್ಟಭದ್ರರು. ಅವರ ತರುವಾಯ ಚನ್ನಬಸವಣ್ಣನವರು ಶೂನ್ಯಸಿಂಹಾಸನದಲ್ಲಿ ಮಂಡಿಸಿದರು. ಅಲ್ಲಮರು ಕೇವಲ ಮೂರು ತಿಂಗಳಕಾಲ ಶೂನ್ಯ ಸಿಂಹಾಸನಾರೂಢರಾಗಿ ಶಿವಾನುಭವವನ್ನು ಬೋಧಿಸಿದರು. ಅನಂತರ ಪ್ರಮಥರು ಚನ್ನಬಸವಣ್ಣನವರನ್ನು ಆ ಪೀಠದಮೇಲೆ ಕುಳ್ಳಿರಿಸಿದಂತಿದೆ. ಆ ಪೀಠದ ಮುಖ್ಯ ಕಾರ್ಯಗಳೆಲ್ಲ ಅವರ ನೇತೃತ್ವದಲ್ಲಿ ನಡೆಯುತ್ತಿದ್ದುವು. ಆದುದರಿಂದ ಚನ್ನಬಸವಣ್ಣ ನವರನ್ನು ಶೂನ್ಯಪೀಠದ ಎರಡನೆಯ ಅಧ್ಯಕ್ಷರೆಂದು ವೀರಶೈವರು ಗೌರವಿಸುತ್ತಾರೆ. ಇದಕ್ಕೆ ಪುಷ್ಟಿಯನ್ನು ಕೊಡುವಂತೆ ಕೆಲವು ಉಲ್ಲೇಖನಗಳು ಅಲ್ಲಲ್ಲಿ ದೊರೆಯುತ್ತವೆ. ಶೂನ್ಯಸಿಂಹಾ ಸನಾಧೀಶರಾದ ತಮ್ಮ ಅಂತಃಸ್ಥಿತಿಯನ್ನು ಚನ್ನಬಸವಣ್ಣನವರೇ ತಮ್ಮದೊಂದು ವಚನದಲ್ಲಿ “ ಎನ್ನಮನದಲ್ಲಿ ಇದೇ ಪಥವಯ್ಯಾ, ಬೆಸನುವಡೆ; ಪ್ರಾಣದ ಮಥನಭಾವನಟ್ಟು, ತನು ಸ್ಥಿತಿ ಮರೆದು, ಭ್ರಾಂತು ಸೂತಕವೆಲ್ಲಾ ನಿವಾರಿಸಿ ಹೋದುವು ಶೂನ್ಯ ಸಿಂಹಾಸನದ ಮೇಲೆ, ಕೂಡಲಚನ್ನಸಂಗಾ, ನಿಮ್ಮ ಶರಣನ ಪ್ರಭೆಯಿಂದ ”—ಎಂದು ಹೇಳಿರುತ್ತಾರೆ. ಇದರಿಂದ ಚನ್ನ ಬಸವಣ್ಣನವರು ಅನುಭವಮಂಟಪದಲ್ಲಿ ಶೂನ್ಯಪೀಠದ ಅಧ್ಯಕ್ಷ

ರಾಗಿದ್ದರೆಂದು ವ್ಯಕ್ತವಾಗುತ್ತದೆ. ಚನ್ನಬಸವಣ್ಣನವರಲ್ಲಿ ಭಾವ ಲಿಂಗಜ್ಞಾನ ತುಂಬಿ, ನಿರ್ದೇಹ ಮನೋಭಾವ ಬಲಿತು, ಸೂತಕದ ಭ್ರಾಂತು ಹರಿದು, ಶೂನ್ಯಪಥ ಸೆಲಸಿತ್ತು. ಶೂನ್ಯ ಸಿಂಹಾಸನ ನೂತನ ಸಮಾಜ ರಚನೆಯ ಪ್ರಮುಖ ಸಂಕೇತವಾಗಿ ವಿಚಾರಗೋಷ್ಠಿಯ ಅಧ್ಯಕ್ಷ ಸ್ಥಾನವಾಗಿ ಏರ್ಪಟ್ಟಿತ್ತೆಂಬು ವುದರಲ್ಲಿ ಅನುಮಾನವಿಲ್ಲ. ಇದು ಒಂದು ನಿರಾಭಾರಿ ಪೀಠವೆಂಬ ಕಲ್ಪನೆ ಬಸವಣ್ಣನವರ ತರುವಾಯ ಎಷ್ಟೋ ಕಾಲದ ಮೇಲೆ ಮೂಡಿರಬೇಕು!

ಅಲ್ಲಮರು ಕಲ್ಯಾಣವನ್ನು ಬಿಟ್ಟು ಶ್ರೀಶೈಲದತ್ತ ಹೋದ ಮೇಲೆ, ಬಸವಣ್ಣನವರು ಕೆಲವು ಕಾಲದಲ್ಲಿಯೇ ತಮ್ಮ ಮಂತ್ರಿ ಪದವಿಯನ್ನು ಚನ್ನಬಸವಣ್ಣನವರಿಗೆ ಒಪ್ಪಿಸಿ, ಬಿಜ್ಜಳನ ಅನು ಮತಿಯಿಂದಲೇ ಕಪ್ಪಡಿಸಂಗಮ ಕ್ಷೇತ್ರಕ್ಕೆ ಹೋಗಿ ನಿಂತರೆಂದು ವೀರಶೈವ ವಾಙ್ಮಯದಿಂದ ಗೊತ್ತಾಗುತ್ತದೆ. ಆ ತರುವಾಯ ಸ್ವಲ್ಪ ದಿನಗಳಲ್ಲಿಯೇ ಕಲ್ಯಾಣದ ಕ್ರಾಂತಿಯಾಯಿತೆಂದೂ ತಿಳಿದು ಬರುತ್ತದೆ. ಮೊದಲೇ ಬಸವಣ್ಣನವರು ಶಿವಭಕ್ತ ಮಾದಿಗರ ಹರಳಯ್ಯನ ಮಗನೊಂದಿಗೆ ಶಿವಭಕ್ತ ಬ್ರಾಹ್ಮಣ ಮಧು ವರಸಯ್ಯನ ಮಗಳ ಮದುವೆಯನ್ನು ಮಾಡಿಸಿದ್ದುದರಿಂದ ಸನಾತನ ಧರ್ಮನಿಷ್ಠರು ಅಸಮಾಧಾನಪಟ್ಟರು. ಅಷ್ಟೇಕೆ! ಬಸವಣ್ಣನವರಿಗಿಂತ ಹಿಂದೆಯೇ ಇದ್ದ ವೀರಶೈವ ಮತದವರೂ ಈ ಜಾತಿಸಾಂಕರ್ಯವನ್ನು ಒಪ್ಪಲಿಲ್ಲ. ಧರ್ಮನಿಷ್ಠರು ಬಿಜ್ಜಳನಲ್ಲಿ ಬಸವಣ್ಣನವರ ವಿಚಾರವಾಗಿ ದೂರು ಹೊತ್ತರು! ರಾಜನೂ ಕುಪಿತನಾದನು. ಬಿಜ್ಜಳನಿಗೂ ಬಸವಣ್ಣನವರಿಗೂ ಮನಸ್ತಾಪ ಬಂತು. ಬಸವಣ್ಣನವರು ಕಲ್ಯಾಣವನ್ನು ಬಿಡ ಬೇಕಾಯಿತು. ಆ ತರುವಾಯ ಮೂರು ತಿಂಗಳಲ್ಲಿಯೇ ಬಿಜ್ಜಳನ

ಕಗ್ಗೊಲೆಯಾಯಿತು ; ಅಳಿಯ ಬಿಜ್ಜಳನು ಮಂತ್ರಿ ಚನ್ನ ಬಸವಣ್ಣನವರ ಮನೆಯನ್ನು ಮುತ್ತಿದನು. ಆ ವೇಳೆಗಾಗಲೇ ಅವರು ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಪಡಿಹಾರಿ ಉತ್ತಣ್ಣ, ಕೂಗಿನ ಮಾದಯ್ಯ, ಹಡಪದ ರೇಚಣ್ಣ ಮೊದಲಾದ ಅಸಂಖ್ಯಾತ ಶರಣರೊಂದಿಗೆ ಕಲ್ಯಾಣವನ್ನು ಬಿಟ್ಟು ಉಳವಿಯ ಕಡೆಗೆ ಧಾವಿಸಿದ್ದರು. ಕಲ್ಯಾಣದಲ್ಲಿ ಕ್ರಾಂತಿಯ ಕಿಡಿ ಹಾರು ತ್ತಿದ್ದುದನ್ನು ಮೊದಲೇ ಮನಗಂಡಿದ್ದ ಚನ್ನಬಸವಣ್ಣನವರು ರಾಜ್ಯವಿಪ್ಲವವನ್ನು ನಿರೀಕ್ಷಿಸಿದ್ದರು. ಅವರಿಗೆ ಆಗ ಇನ್ನೂ ಚಿಕ್ಕವಯಸ್ಸು. ಬಸವಣ್ಣನವರ ನೆರವೂ ಇರಲಿಲ್ಲ. ಆ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಅವರಿಗೆ ಸೂಕ್ತ ಸಲಹೆ ಹೇಳಬಲ್ಲ ಸಮರ್ಥ ರಾಜಕೀಯ ನಿಪುಣರಿರಲಿಲ್ಲ. ಎಷ್ಟೋ ಜನ ಶರಣರಿದ್ದರು ! ಜಂಗಮ ಪುಂಗವರಿದ್ದರು ! ಅವರೆಲ್ಲಾ ತತ್ವಜ್ಞಾನ ಸಂಪನ್ನ ರಾಗಿದ್ದರೇ ಹೊರತು ರಾಜಕಾರ್ಯ ಸಂಧಾನ ಚತುರರಾಗಿರಲಿಲ್ಲ ! ಚನ್ನಬಸವಣ್ಣನವರು ಮೊದಲುಗೊಂಡು ಯಾವ ಶರಣರೂ ಯುದ್ಧ ಮುಖವನ್ನೇ ಅರಿಯರು. ರಾಜನೀತಿಯನ್ನು ತಿಳಿಯರು. ಸುಸಜ್ಜಿತವಾದ ರಾಜಸೈನ್ಯವನ್ನು ಎದುರಿಸಲು ಶರಣರಿಗೆ ಧೈರ್ಯವೂ ಇರಲಿಲ್ಲ ; ಸಾಹಸವೂ ಇರಲಿಲ್ಲ ! ಅವರೆಲ್ಲ 'ವಚನ' ಪ್ರವೀಣರಾಗಿದ್ದರು ! ಉಳವಿ ಕ್ಷೇತ್ರ ಆಗ ಘೋರಾರಣ್ಯ ಪ್ರದೇಶವಾಗಿತ್ತು. ಅದು ಪಶ್ಚಿಮ ದಿಕ್ಕಿನಲ್ಲಿ ಸಹ್ಯಾದ್ರಿ ಶ್ರೇಣಿಯ ಸಾನು ಪ್ರಾಂತದಲ್ಲಿದೆ. ಚನ್ನಬಸವಣ್ಣನವರು ತಮ್ಮ ಅನುಯಾಯಿಗಳೊಂದಿಗೆ ಆ ರಾತ್ರಿ ಕಗ್ಗತ್ತಲೆಯಲ್ಲಿಯೇ ಕಲ್ಯಾಣವನ್ನು ಬಿಡಬೇಕಾಯಿತು. ಅಂಥ ದಾರುಣ ಪರಿಸ್ಥಿತಿ ಅಂದು ಕಲ್ಯಾಣದಲ್ಲಿತ್ತು. ಆದರೂ, ಚನ್ನಬಸವಣ್ಣನವರು ಧೈರ್ಯಗೆಡಲಿಲ್ಲ ; ವಿವೇಕಶೂನ್ಯರಾಗಲಿಲ್ಲ ! ಆತ್ಮ ರಕ್ಷಣೆ

ಮಾಡಿಕೊಳ್ಳಲು ಅವರು ಮೊದಲೆ ಸುಸಜ್ಜಿತರಾಗಿದ್ದರೆಂದು ಹೇಳಬಹುದು. ಅವರು ಸಮರ್ಥ ಶರಣರನ್ನು ಮುಂಚೆಯೇ ಕಳುಹಿಸಿ ದಾರಿಯ ಮಧ್ಯದಲ್ಲಿ ಅಲ್ಲಲ್ಲಿ ತಂಗಲು ಯೋಗ್ಯ ವ್ಯವಸ್ಥೆಯನ್ನು ಮಾಡಿಸಿದ್ದರೆಂದು ನಂಬಬಹುದು. ಅವರು ಕಲ್ಯಾಣದಿಂದ ಹೊರಟು ತದ್ದೇವಾಡಿಯ ಪ್ರಾಂತವನ್ನು ದಾಟಿ, ಮಲಪ್ರಭಾ ನದಿಯ ತೀರದಲ್ಲಿಯೇ ನಡೆದು ಉಳವಿಯನ್ನು ಸೇರಿದಂತೆ ವೀರಶೈವ ಸಾಹಿತ್ಯದಿಂದ ಅರಿಯಬಹುದು. ಅಲ್ಲದೆ, ಶರಣರು ಉಳವಿಯತ್ತ ಸುಳಿದಂತೆ ಅನೇಕ ಸ್ಥಳಗಳಲ್ಲಿ ಶರಣರ ಶಿಲಾವಿಗ್ರಹಗಳ ಕುರುಹುಗಳೂ ಇವೆ. ಉಳವಿ ಅದುವರೆಗಾಗಲೇ ಪ್ರಸಿದ್ಧ ವೀರಶೈವ ಕ್ಷೇತ್ರವಾಗಿತ್ತು. ಅಲ್ಲಿ ಪ್ರಾಚೀನ ವೀರಭದ್ರ ಸ್ವಾಮಿಯ ದೇವಾಲಯವಿದೆ. ಅನೇಕ ಶರಣರು ಅಲ್ಲಿ ಆಶ್ರಯ ಪಡೆದರು. ಚನ್ನಬಸವಣ್ಣನವರು ಅಲ್ಲಿಯೇ ಶಿವಯೋಗಸಮಾಧಿ ಮಗ್ನರಾಗಿದ್ದು ಲಿಂಗೈಕ್ಯರಾದರು.

ಮುಹಮದ್ ಪೈಗಂಬರರು ಮೆಕ್ಕಾದಿಂದ ಮೆದೀನಾಕ್ಕೆ ಓಡಿ ಹೋದ ಐತಿಹಾಸಿಕ ಘಟನೆಯಂತೆಯೇ ಚನ್ನಬಸವಣ್ಣನವರು ಕಲ್ಯಾಣದಿಂದ ಉಳವಿಗೆ ಧಾವಿಸಿದುದೂ ಐತಿಹಾಸಿಕ ಘಟನೆಯಾಗಿದೆ. ಚನ್ನಬಸವಣ್ಣನವರು ಕ್ರಿ.ಶ. 1168ರಲ್ಲಿ ಬಯಲಾದರೆಂದು ಇತಿಹಾಸಜ್ಞರ ಅಭಿಪ್ರಾಯ. ಅವರ ಯೋಗ ಸಮಾಧಿ ಉಳವಿಯಲ್ಲಿದೆ. ಇದು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನಲ್ಲಿ, ಸೊರಬದಿಂದ ನೈಋತ್ಯ ದಿಕ್ಕಿನಲ್ಲಿ ಮೂರು ಹರದಾರಿ ದೂರದಲ್ಲಿದೆ. ಇದು ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ರಾಜಧಾನಿಯಾಗಿರಬೇಕು. ಇದು ನಿಸರ್ಗ ಸೌಂದರ್ಯದ ಮಡಿಲಿನಲ್ಲಿ ಮುಗ್ಧ ಶಿಶುವಿನಂತೆ ಕಂಗೊಳಿಸುತ್ತಿದೆ. ಚನ್ನಬಸವಣ್ಣನವರು ಶರಣ ಧರ್ಮದಲ್ಲಿ ಯಶಃಕಾಯರಾಗಿದ್ದಾರೆ. ಅವರು

ವೀರಶೈವ ಧರ್ಮದ ಅಂತಶ್ಶಕ್ತಿಯಂತಿರುವ ಷಟ್ಸ್ಥಲ ಸಿದ್ಧಾಂತ ವನ್ನು ಪ್ರಮಾಣಪುರಸ್ಸರವಾಗಿ ಹೇಳಿದರು.

ಅವರ ತರುವಾಯ ಶರಣಧರ್ಮ ಕರ್ಣಾಟಕದಲ್ಲಿ ಅವರ ಕೀರ್ತಿಪ್ರಭಾವವನ್ನು ಬೀರಿತು. ಅನೇಕ ಶರಣರು ನಾಡಿನ ನಾನಾಭಾಗಗಳಲ್ಲಿ ನೆಲಸಿ ಮಠಗಳನ್ನು ನಿರ್ಮಿಸಿಕೊಂಡು ವೀರಶೈವಧರ್ಮ, ಸಂಸ್ಕೃತಿ ಮತ್ತು ಸಾಹಿತ್ಯ ಪ್ರಚಾರ ಕಾರ್ಯ ಗಳನ್ನು ಲವಲವಿಕೆಯಿಂದ ನಡೆಸುತ್ತ ಬಂದರು. ಶಿವಾನುಭವ ಗೋಷ್ಠಿಗಳು ಜನಜೀವನದಲ್ಲಿ ಆಧ್ಯಾತ್ಮಿಕ ಮನೋಭಾವವನ್ನು ಬೆಳಸಿದುವು. ಆ ಧರ್ಮಜ್ಯೋತಿ ನಿರಂತರ ನಾಡಿನಲ್ಲಿ ಬೆಳಗಿತು. ಚನ್ನಬಸವಣ್ಣನವರ ಪರಮಾಪ್ತ ಶರಣ ರೇಚಣ್ಣ ಕಾವೇರೀ ತೀರದಲ್ಲಿ ಅನೇಕ ಕಡೆಗಳಲ್ಲಿ ಅನುಷ್ಠಾನಮಾಡಿ, ವೀರಶೈವವನ್ನು ದಕ್ಷಿಣ ಕರ್ಣಾಟಕದಲ್ಲಿ ಪ್ರತಿಷ್ಠಿಗೊಳಿಸಿದರು. ರೇವಣಸಿದ್ಧರೂ ಶಾಂತವೀರನೆಂಬ ಹೆಸರಿನಿಂದ ಕಾವೇರಿ ಪ್ರಾಂತದಲ್ಲಿ ಬಹಳ ಕಾಲ ನೆಲಸಿದ್ದರೆಂದೂ ಅರ್ಕಾವತೀ ತೀರದಲ್ಲಿರುವ ರೇವಣಸಿದ್ಧೇಶ್ವರ ಗಿರಿಯಲ್ಲಿ ಶಿವಯೋಗಸಿರತರಾಗಿದ್ದರೆಂದೂ ವೀರಶೈವ ವಾಙ್ಮಯ ದಿಂದ ತಿಳಿದುಬರುತ್ತದೆ. ಶರಣ ರೇಚಣ್ಣ ರೇವಣಸಿದ್ಧರ ಶಿಷ್ಯನೆಂದು ಕಂಡುಬರುತ್ತದೆ. ರೇಚಣ ವೃದ್ಧಾಪ್ಯದಲ್ಲಿ ತುಮಕೂರು ಜಿಲ್ಲೆಯಲ್ಲಿ ಈಗ ಸಿದ್ಧಗಂಗಾಕ್ಷೇತ್ರವೆಂದು ಪ್ರಸಿದ್ಧ ವಾಗಿರುವ ಪವಿತ್ರ ಗಿರಿಯಲ್ಲಿ ಬಹಳ ಕಾಲ ಶಿವಯೋಗನಿರತ ರಾಗಿದ್ದು ಅಲ್ಲಿಯೇ ಬಯಲಾದರು. ಚನ್ನಬಸವಣ್ಣನವರ ಶಿಷ್ಯಪರಂಪರೆ ದಕ್ಷಿಣ ಕರ್ನಾಟಕದಲ್ಲಿ ವೀರಶೈವದಲ್ಲಿ ಹೊಸ ಶಕ್ತಿಯನ್ನು ತುಂಬಿತು. ನಾನಾ ಶೈವಪಂಗಡಗಳೂ ಶರಣಧರ್ಮ ದಲ್ಲಿ ಸಮಾವೇಶಗೊಂಡು ಸನಾತನ ವೀರಶೈವದಲ್ಲಿ ಉದಾರ ಚಿತ್ತವೃತ್ತಿಯನ್ನು ಮೂಡಿಸಿದುವು. ದಕ್ಷಿಣದ ತಮಿಳು ಶೈವವೂ

ಶರಣಧರ್ಮವೂ ಕರ್ಣಾಟಕದ ದಕ್ಷಿಣಾಗ್ರದಲ್ಲಿರುವ ಸುತ್ತೂರು ವೀರಶೈವಕೇಂದ್ರದಲ್ಲಿ ಬೆಸುಗೆಯಾದುವು. ಇದರಿಂದ ಸತ್ವಪೂರ್ಣವಾದ ವೀರಶೈವಧರ್ಮ ರೂಪುಗೊಂಡಿತು. ಚನ್ನಬಸವಣ್ಣನವರ ಪ್ರಭಾವ ಇಂದಿಗೂ ಸಮಾಜದ ಮೇಲೆ ಅಚ್ಚಳಿಯದಂತೆ ಉಳಿದಿರುತ್ತದೆ. ಅವರು ಲಿಂಗವಂತ ಸಮಾಜದ ವಿರಾಡ್ರೂಪವನ್ನು ಗಾಢವಾಗಿ ಚಿಂತಿಸಿದರು. ಸೂಕ್ಷ್ಮವಾಗಿ ಅರಿತರು. ಅವರಿಗೆ ತೋಳೆದ ಸತ್ಯವನ್ನು ಮುಚ್ಚುಮರೆಯಿಲ್ಲದೆ ಭಾವಪೂರ್ಣವಾಗಿ ಹೇಳಿದರು; ಹೃದಯಂಗಮವಾಗಿ ನಿರೂಪಿಸಿದರು. ಅವರ ಮಾತಿನಲ್ಲಿ ಸತ್ವವಿದೆ; ಸತ್ಯವಿದೆ. ಅವರು ತಮ್ಮ ಸಮಕಾಲದ ಸಮಾಜದ ಕುಂದುಕೊರತೆಗಳನ್ನು ಕಂಡಂತೆಯೇ ತಮಗಿಂತಲೂ ಹಿಂದೆ ಇದ್ದ ಸಮಾಜದ ಜೀವಂತ ಚಿತ್ರವನ್ನೂ ಪರಿಭಾವಿಸಿದರು. ಅವರು ನಿಷ್ಪಕ್ಷಪಾತ ಬುದ್ಧಿಯಿಂದ, ನಿರ್ದಾಕ್ಷಿಣ್ಯ ದೃಷ್ಟಿಯಿಂದ ನಿರ್ಮಲಹೃದಯದಿಂದ, ನಿರ್ದುಷ್ಟಭಾವದಿಂದ ಸಮಾಜಜೀವನವನ್ನು ವಿಮರ್ಶಿಸಿದರು. ಅವರು ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳನ್ನು ವಿವರಿಸಿ, ನೂತನ ಸಮಾಜವನ್ನು ರೂಪಿಸಿ, ಜಾತಿಮತ ಕುಲಗೋತ್ರ ಹೆಣ್ಣು ಗಂಡು ಕೀಳು ಮೇಲು ಎಂಬ ತಾರತಮ್ಯಗಳನ್ನು ಕಿತ್ತೊಗೆದು ವೀರಶೈವ ಧರ್ಮವನ್ನು ದೃಢ ವಿಶಾಲವಾದ ತಳಹದಿಯಮೇಲೆ ನಿಲ್ಲಿಸಿ ಕೃತಕೃತ್ಯರಾದರು; ವೀರಶೈವ ಧರ್ಮ ಸರ್ವರ ಸ್ವತ್ತು ಎಂಬುದನ್ನು ಘೋಷಿಸಿದರು. ಅವರ ಕ್ರಿಯಾಶಕ್ತಿಯನ್ನು, ಜ್ಞಾನಪ್ರಭೆಯನ್ನು, ವ್ಯಕ್ತಿಸ್ವರೂಪವನ್ನು ಅಂದಿನ ಶರಣರೂ ಮುಂದಿನ ಕವಿಗಳೂ ಮುಕ್ತಕಂಠದಿಂದ ಪ್ರಶಂಸಿಸಿದರು. "ಆಚಾರದಲ್ಲಿ ಅನುಭಾವಿ, ಪ್ರಸಾದದಲ್ಲಿ ಪರಿಣಾಮಿ, ಗುಹೇಶ್ವರ ಲಿಂಗದಲ್ಲಿ ಚನ್ನಬಸವಣ್ಣನೆಂಬ ಪ್ರಸಾದಿಗೆ ನಮೋ ನಮೋ

ಎನುತಿರ್ದೆನು ” ಎಂದು ಅಲ್ಲಮರೂ, “ ಶಿವಾಚಾರದ ವಿಚಾರವ ನರಿಯದೆ ಜಗವು ಕೆಟ್ಟಿಹುದೆಂದೂ, ಪರಮಪುರುಷಾರ್ಥಕಾರಣ ವಾಗಿ ಮರ್ತ್ಯಲೋಕದಲ್ಲಿ ಅವತರಿಸಿ ” “ ಎನ್ನಭ್ರಾಂತಿ ಸೂತಕವ ಬಿಡಿಸಿ, ಲಿಂಗೈಕ್ಯವೆಂಬುದನೆನಗೆ ತೋರಿದೆಯಾಗಿ ” “ ಎನಗೆ ನೀನು ಪರಮಾರಾಧ್ಯ, ಕಾಣಾ ಚನ್ನಬಸವಣ್ಣಾ ! ”ಎಂದು ಬಸವಣ್ಣನವರೂ “ ಚನ್ನಬಸವಣ್ಣ ತೋರಿದ ಹಾದಿ ಸಫಲ ವಾಯಿತ್ತಾಗಿ ನಾನು ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು ” ಎಂದು ಸಿದ್ಧರಾಮದೇವರೂ “ ಎನ್ನ ಪರಿಣಾಮ ಚನ್ನಬಸವಣ್ಣನ ಧರ್ಮ, ಚನ್ನಮಲ್ಲಿಕಾರ್ಜುನ ದೇವರ ನೆನಹಿ ನಲ್ಲಿ ನಿನ್ನ ‘ ಕರುಣದಶಿಶು ’ ನಾನು ಕಾಣಾ, ಚನ್ನಬಸವಣ್ಣಾ ” ಎಂದು ಅಕ್ಕಮಹಾದೇವಿಯವರೂ, “ ಎನ್ನಮನದ ಕಪಟ ಹಿಂಗಿತ್ತಯ್ಯಾ ಸಂಗನ ಬಸವಣ್ಣನ ಕರುಣವ ಪಡೆದೆನಾಗಿ ” ಎಂದು ಅಕ್ಕ ನಾಗಲಾಂಬಿಯರೂ, “ ಎನಗೆ ಬಲ್ಲತನವ ತೋರಿದ ಎನ್ನವಲ್ಲಭ ನೀನೇ ಚನ್ನಬಸವಣ್ಣಾ ” ಎಂದು ಮೋಳಿಗೆಯ ಮಾರಯ್ಯನವರೂ, “ ಬಸವಣ್ಣಂಗೆ ಚನ್ನಬಸವಣ್ಣನೆ ಶೃಂಗಾರ; ಎನಗೆಯೂ ನಿನಗೆಯೂ (ಕಲಿದೇವನಿಗೆಯೂ) ಚನ್ನಬಸವಣ್ಣನೇ ಶೃಂಗಾರ ” ಎಂದು ಮಡಿವಾಳ ಮಾಚಯ್ಯ ಶರಣರೂ “ ಷಡುಸ್ಥಲ ಚಕ್ರವರ್ತಿಯಯ್ಯಾ ಚನ್ನಬಸವಣ್ಣನು ” ಎಂದು ಮರುಳ ಶಂಕರದೇವರೂ “ ಚನ್ನಬಸವಣ್ಣನೇ ಎನ್ನ ಅಂತರಂಗದ ಸುಜ್ಞಾನಪ್ರಾಣಲಿಂಗವೆಂದರಿದು ಪ್ರಾಣಲಿಂಗಿಯಾದೆನು ಕಾಣಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ ” ಎಂದು ತೋಂಟದ ಸಿದ್ಧಲಿಂಗಯತೀಶ್ವರರೂ ಚನ್ನಬಸವಣ್ಣನವರನ್ನು ಗೌರವಿಸು ತ್ತಾರೆ.

ಹರಿಹರ, ಪಾಲ್ಕುರಿಕೆಯ ಸೋಮನಾಥ, ಭೀಮಕವಿ,

ಲಕ್ಕಣ್ಣದಂಡೇಶ, ಚಾಮರಸ, ಮಗ್ಗೆಯ ಮಾಯಿದೇವ, ಗುಬ್ಬಿ ಮಲ್ಲಣ್ಣ, ವಿರಕ್ತತೋಂಟದಾರ್ಯ, ಮುರುಗೆಯ ದೇಶಿಕೇಂದ್ರ, ವಿರೂಪಾಕ್ಷ ಪಂಡಿತ, ಷಡಕ್ಷರದೇವ, ಚನ್ನಪ್ಪ ಕವಿ ಮೊದಲಾದ ಶಿವಕವಿಗಣವೂ ಚನ್ನಬಸವಣ್ಣನವರನ್ನು ಕೊಂಡಾಡಿರುತ್ತದೆ.

ಆದರೆ ಚನ್ನಬಸವಣ್ಣನವರು ಸ್ತುತಿಪ್ರಿಯರಲ್ಲ ; ಕರ್ತವ್ಯ ನಿಷ್ಠರು. ಅವರು ಹೊಗಳಿಕೆಯನ್ನು ನಿರೀಕ್ಷಿಸುವವರೂ ಅಲ್ಲ ; ಅಪಾತ್ರರನ್ನು ಹೊಗಳಬೇಕೆಂಬ ಚಪಲಚಿತ್ತರೂ ಅಲ್ಲ ! ಸೌಜನ್ಯದ ಎಲ್ಲೆಯನ್ನು ಅರಿತವರು ಎಂದೂ ಬೂಟಾಟಿಕೆಯ ಹೊಗಳಿಕೆಯನ್ನು ಮಾಡುವುದೂ ಇಲ್ಲ. ಅಂಥ ಮುಖಸ್ತುತಿ ಯನ್ನು ಸಹಿಸುವುದೂ ಇಲ್ಲ. ಒಂದು ಸಂದರ್ಭದಲ್ಲಿ ಚನ್ನಬಸವಣ್ಣ ನವರು “ ಎನ್ನ ಹೊಗಳಲಿಕೆ ನಿಮಗೆ ತೆರಹಿಲ್ಲ, ನಿಮ್ಮ ಹೊಗಳಲಿಕೆ ಎನಗೆ ತೆರಹಿಲ್ಲ. ಒಬ್ಬರನೊಬ್ಬರ ಹೊಗಳಲಿಕೆ ಹೊತ್ತು ಹೋಯಿತ್ತಲ್ಲದೆ ಸಂಗಮನಾಥನ ಆಪ್ಯಾಯನಕ್ಕೆ ಪದಾರ್ಥವ ನೀಡಲಿಲ್ಲ. ಕೂಡಲಚನ್ನಸಂಗಯ್ಯಂಗೆ ಪದಾರ್ಥವನಳವಡಿಸಿ ನಡೆಯಿಸಿರೆ ಸಂಗನ ಬಸವಣ್ಣಾ ”–ಎಂದು ಬಸವಣ್ಣನವರಿಗೆ ದಿಟ್ಟತನದಿಂದ ಹೇಳಿದರು. ಸಂಗಮನಾಥನ ಪ್ರತಿರೂಪೀ ಸಮಾಜದ ಸೇವೆಗೆ ಅನುವಾಗಬೇಕೆಂಬ ಅವರ ಉನ್ನತ ಆದರ್ಶ ವನ್ನು ಬಸವಣ್ಣನವರೂ ಒಪ್ಪಿದರು. ಅವರು ‘ ಗುಣಕ್ಕೆ ಮತ್ಸರವುಂಟೆ ? ’ ಎಂಬುದನ್ನು ಬಲ್ಲವರು. ಗುಣೈಕಪಕ್ಷಪಾತಿ ಗಳಾದ ಚನ್ನಬಸವಣ್ಣನವರು ಉತ್ತಮ ಗುಣಸಂಪನ್ನರನ್ನು ಮನಸಾರೆ ಕೊಂಡಾಡುತ್ತಿದ್ದರು ; ಅವರನ್ನು ಮೆಚ್ಚಿ ಸಂತೋಷ ಪಡುತ್ತಿದ್ದರು. ಅನ್ಯರೂ ಅವರ ಗುಣವನ್ನು ಇದೇ ರೀತಿಯಿಂದ ಮೆಚ್ಚಿರಬೇಕು ; ಮೆಚ್ಚಿ ನಲಿದಿರಬೇಕು.

ಅವರು ಹಿರಿಯರಿಗೆ ಅಸದೃಶ ಗೌರವವನ್ನು ನೀಡಿದರು.

“ಸಂಗನ ಬಸವಣ್ಣನ ಕರುಣದ ಶಿಶು”ವೆಂದು ಅವರು ತಲೆಬಾಗಿ ‘ಶರಣ ಪ್ರಭುದೇವರು ಅಜಾತನೆಂಬ ಭೇದವೆನಗಿಂದು ತಿಳಿಯಿತ್ತು’ ಎಂದು ಪ್ರಭುವನ್ನು ವಂದಿಸಿ, ‘ಎನ್ನಂತರಂಗವೇ ಬಸವಣ್ಣ, ಬಹಿರಂಗ ಮಡಿವಾಳ ಮಾಚಯ್ಯ, ಈ ಉಭಯಸಂಗವೇ ಪ್ರಭುದೇವರು’ ಎಂದು ಭಕ್ತಿಯಿಂದ ಶರಣಾರ್ಥಿ ಎಂದರು. ಶರಣರಲ್ಲಿ ಚನ್ನಬಸವಣ್ಣನವರು ಬೆಳಕಿನಲ್ಲಿ ಬೆಳಕಾಗಿ ಹೊಳೆದರು.

೧೦

ಚನ್ನಬಸವಣ್ಣನವರು ಉತ್ತಮ ‘ವಚನ’ಕಾರರು. ಅವರು ಷಟ್ಸ್ಥಲ ವಚನ, ಕರಣಹಸುಗೆ, ಮಿಶ್ರಾರ್ಪಣ, ಪದಮಂತ್ರಗೋಪ್ಯ, ಮಂತ್ರಗೋಪ್ಯ, ಕಾಲಜ್ಞಾನ, ಷಟ್ಚಕ್ರದ ವಚನ, ರಾಜಯೋಗದ ವಚನ, ರುದ್ರಭಾರತದ ಸೃಷ್ಟಿ ಎಂಬ ಗ್ರಂಥಗಳನ್ನು ರಚಿಸಿರುತ್ತಾರೆಂದು ಕವಿಚರಿತೆಯಲ್ಲಿ ಹೇಳಿದೆ. ಇವರ ವಿಷಯವಾಗಿ ಚೆನ್ನಬಸವಪುರಾಣ, ಚೆನ್ನಬಸವಸ್ತೋತ್ರದ ರಗಳೆ ಮುಂತಾದ ಗ್ರಂಥಗಳು ಹುಟ್ಟಿವೆ. ಇವರ ಗ್ರಂಥಗಳು ಪ್ರಾಯಶಃ ವಚನರೂಪವಾಗಿವೆ; ಎಲ್ಲವೂ ವೀರಶೈವ ಮತವನ್ನು ಪ್ರತಿಪಾದಿಸುತ್ತವೆ. ವಚನಗಳಲ್ಲಿ ‘ಕೂಡಲಚೆನ್ನಸಂಗಮದೇವ’ ಎಂಬ ಅಂಕಿತವಿದೆ. ‘ತೊಂಬತ್ತಾರು ಸಕೀಲಗಳು’ ಎಂಬ ಇನ್ನೊಂದು ಗ್ರಂಥವನ್ನೂ ಇವರು ಬರೆದಿರುವಂತೆ ತಿಳಿದುಬರುತ್ತದೆ. ಕರಣಹಸುಗೆ ಗದ್ಯಗ್ರಂಥ. ಇದರಲ್ಲಿ ಪ್ರಣವಮೂಲ, ಪಂಚಭೂತಗಳ ಉತ್ಪತ್ತಿ, ಪ್ರಪಂಚೋದಯ, ಆತ್ಮ, ಪಂಚವಿಂಶತಿ ತತ್ವಗಳು, ವೇದಾಂತಕ್ಕೆ ಸಂಬಂಧಿಸಿದ ಸಾಂಕೇತಿಕ ಶಬ್ದಗಳು—ಮೊದಲಾದ ವೀರಶೈವ ತತ್ವಗಳ ವಿವರಣೆ ಇದೆ. ಮಿಶ್ರಾರ್ಪಣವೂ ಗದ್ಯಗ್ರಂಥ. ಇದರಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ಮತ್ತು

ಪರಿಪೂರ್ಣಾರ್ಪಣಗಳನ್ನು ವಿವೇಚಿಸಿರುತ್ತಾರೆ. ಪದಮಂತ್ರ ಗೋಪ್ಯ ಮತ್ತು ಮಂತ್ರಗೋಪ್ಯಗಳಲ್ಲಿ ವೀರಶೈವ ಧರ್ಮಸೂಕ್ಷ್ಮ ಗಳನ್ನೂ ಶಿವಯೋಗಸ್ವರೂಪವನ್ನೂ ಹೇಳಿರುತ್ತಾರೆ. ಪದಮಂತ್ರ ಗೋಪ್ಯದಲ್ಲಿ ಸಿದ್ಧರಾಮರಿಗೆ ಶಿವಯೋಗ ಮಾರ್ಗಲಕ್ಷಣವನ್ನು ಬೋಧಿಸಿರುತ್ತಾರೆ. ಕಾಲಜ್ಞಾನದಲ್ಲಿ ಭವಿಷ್ಯಕಾಲದ ಘಟನೆ ಗಳನ್ನು ಸೂಚಿಸಿರುತ್ತಾರೆ. 'ತೊಂಬತ್ತಾರು ಸಕೀಲಂಗಳು' ಎಂಬ ಗ್ರಂಥದಲ್ಲಿ ಅವರು ಕಲ್ಯಾಣದ ಅನುಭವಮಂಟಪದ ಗದ್ದು ಗೆಯ ಮೇಲೆ ಮಂಡಿಸಿ ಎಲ್ಲ ಶಿವಶರಣರಿಗೆ ಈ ತೊಂಬತ್ತಾರು ಸಕೀಲಂಗಳ ವಚನಗಳನ್ನು ತಿಳಿಸಿದ್ದಾರೆ. ಅನುಭವಮಂಟಪದ ಗದ್ದುಗೆಯೇ ಶೂನ್ಯಸಿಂಹಾಸನವೆಂದು ಪ್ರಸಿದ್ಧಿಯಾಯಿತು. ಅವರ ಕಾಲದಲ್ಲಿಯೇ ನಾಡಿನ ನಾನಾ ಭಾಗಗಳಲ್ಲಿ ಅನುಭವಮಂಟಪ ಗಳು ಏರ್ಪಟ್ಟಿರಬೇಕು. ಆ ಅನುಭವ ಮಂಟಪಗಳ ಗದ್ದುಗೆಗಳ ಮೇಲೆ ಬುದ್ಧಿವಂತರಾದ ಶರಣ ತತ್ವಜ್ಞರು ಮಂಡಿಸಿ ವೀರಶೈವ ಧರ್ಮತತ್ವಗಳನ್ನು ಬೋಧಿಸುತ್ತಿರಬೇಕು. ಅನೇಕ ಸಂದರ್ಭ ಗಳಲ್ಲಿ ಆ ಗದ್ದುಗೆಯ ಮೇಲೆ ಮಂಡಿಸಿದವರಿಂದ ಸಮಾಜಕ್ಕೆ ಹಿತವಾಗುತ್ತಿರಲಿಲ್ಲವೇನೋ! ಚನ್ನಬಸವಣ್ಣನವರು ಅಂಥ ಅಹಿತಕಾರಿಗಳನ್ನು ನಿರ್ದಾಕ್ಷಿಣ್ಯವಾಗಿ ಎಚ್ಚರಿಸಿ, ಸಮಾಜಾಭ್ಯು ದಯವನ್ನು ಸಾಧಿಸಿದರು. "ಅತಿಮಥನವೆಂಬ ಶೂನ್ಯಸಿಂಹಾಸನವ ನೇರಿಕೊಂಡು ನಾವೆ ಹಿರಿಯರು, ನಾವೆ ದೇವರೆಂಬರು. ತಮ್ಮ ತಾವರಿಯರು. ಅದ್ಭುತಮನಭುಂಜಕರ ಮೆಚ್ಚ ನಮ್ಮ ಕೂಡಲ ಚನ್ನಸಂಗಯ್ಯನು"–ಎಂದು ಚನ್ನಬಸವಣ್ಣನವರು ಅಂದೇ 'ಧರ್ಮಶಾಸನ' ಬರೆದರು! ನಿರ್ಗಮನವೇ ಜಂಗಮ; ನಿಸ್ಸೀಮ ಜಂಗಮ; ನಿಜೈಕ್ಯ ಜಂಗಮ. ಜಂಗಮಲಾಂಛನಧಾರಿಗಳು ಹದಿನೆಂಟು ಜಾತಿಯವರ ಮನೆಗಳಲ್ಲಿ ಉಂಡು ಕೆಟ್ಟರು; ಗಿರಿ

ಗಹ್ವರಗಳಲ್ಲಿರುವ ಜಟಾಧಾರಿಗಳೆಲ್ಲ ಹಣ್ಣುಹಂಪಲುಗಳನ್ನು ತಿಂದು ಕೆಟ್ಟರು! ತರಗೆಲೆಗಳನ್ನು ತಿಂದು ತಪಸ್ಸು ಮಾಡಿದವರೆಲ್ಲರೂ ವಾಯುಭಕ್ಷಣದಿಂದ ಕೆಟ್ಟರು. ಇಂಥವರೆಲ್ಲರನ್ನೂ ಹಿರಿಯರೆಂದು ಒಪ್ಪಬಹುದೆ? ಜಂಗಮವೆಂದರೆ ಕೂಡಲಚೆನ್ನಸಂಗಮದೇವ ತಾನೇ ಪ್ರಭುವೆಂಬ ಜಂಗಮನಾಗಿ ಲೋಕಕಲ್ಯಾಣವನ್ನು ಸಾಧಿಸಿದನೆಂದು ಚನ್ನಬಸವಣ್ಣನವರು ನಿಜಜಂಗಮ ಲಕ್ಷಣವನ್ನು ನಿರ್ದಿಷ್ಟವಾಗಿ ಹೇಳಿದರು.

ಕನ್ನಡ ವಾಙ್ಮಯ ಪ್ರಪಂಚದಲ್ಲಿ 'ವಚನ ಸಾಹಿತ್ಯ' ಆತ್ಮಜ್ಯೋತಿಯಂತೆ ಬೆಳಗುತ್ತಿದೆ. ಚನ್ನಬಸವಣ್ಣನವರ 'ವಚನ' ಗುಚ್ಛ ಕನ್ನಡ ಸಾಹಿತ್ಯದೇವಿಯ ತನುಲತೆಯಲ್ಲಿ ಮಂದಾರ ಪುಷ್ಪದಂತೆ ಶೋಭಿಸುತ್ತಿದೆ. ಅವರ ಕೈಯಲ್ಲಿ ಶಾಸ್ತ್ರಸಾಹಿತ್ಯವಾಯಿತು! ಸಾಹಿತ್ಯ ಶಾಸ್ತ್ರವಾಯಿತು. ಅವರು ಲೋಕಜೀವನದ ನಾನಾ ಮುಖಗಳಲ್ಲಿ ಕಂಡ ನೋವು, ನಲಿವು, ದುಃಖ, ದಾರಿದ್ರ್ಯ, ಅಜ್ಞಾನ, ಅಸತ್ಯ, ಹಿಂಸೆ, ಮೋಸ, ಅಂದ, ಚೆಂದ, ಆಸೆ, ಆಕಾಂಕ್ಷೆಗಳಲ್ಲಿ ಶಿವ ಸ್ವರೂಪವನ್ನೇ ಕಂಡರು. ಅವರು ಭಕ್ತಿ ಗಂಗಾಜಲದಿಂದ ಸಮಾಜ ಪುರುಷನಿಗೆ ಅಭಿಷೇಕ ಮಾಡಿದರು; ಭಾವಪೂಜೆ ಮಾಡಿದರು; 'ವಚನ' ಪುಷ್ಪಮಾಲೆಯನ್ನು ಅರ್ಪಿಸಿ ಅಲಂಕರಿಸಿದರು. ಜನಮನದ ಮಾಲಿನ್ಯವನ್ನು ತೊಳೆದರು, ಯಜ್ಞಯಾಗಗಳ ಉರಿಯ ಬೇಗೆಯನ್ನು ಜ್ಞಾನ ತೀರ್ಥದಿಂದ ನಿವಾರಿಸಿದರು; ಆಳತೆಗೆಟ್ಟು ಬೆಳೆದಿದ್ದ ಅಂಧ ಸಂಪ್ರದಾಯ ಜಾಲವನ್ನು ಕತ್ತರಿಸಿ, ಲಿಂಗಾಚಾರ ಸಂಜೀವಿನಿಯನ್ನು ಸಮಾಜಕ್ಕೆ ನೀಡಿದರು; ದುರಾಚಾರಗಳನ್ನು ತಪ್ಪಿಸಿ ಸಮಾಜವನ್ನು ಸನ್ಮಾರ್ಗದಲ್ಲಿ ನಡೆಸಿದರು. ಸಮಾಜದ ಆತ್ಮಸಂಸ್ಕಾರವಾಯಿತು. ಅವರ ಜ್ಞಾನಾಮೃತಪಾನದಿಂದ ಶರಣರು

ಪರಮಾತ್ಮನ ಸೃಷ್ಟಿಯಲ್ಲಿ ಪ್ರಾಣಿ ಕೋಟಿಯನ್ನು ಶರಣರು ಗೌರವಿಸಿದರು. ದಯೆಯೇ ಧರ್ಮದ ಮೂಲವೆಂಬುದನ್ನು ಸಮಾಜ ಅರಿಯಿತು; ಅರಿತು ಆಚರಿಸಿತು. ಹಿಂಸಾಪ್ರವೃತ್ತಿ ಅಳಿಯಿತು; ಅಹಿಂಸಾಧರ್ಮ ಮೂಡಿತು. ಪರಬ್ರಹ್ಮದ ಅನಂತ ಶಕ್ತಿಯನ್ನು ಸಮಾಜ ಇಷ್ಟಲಿಂಗ ರೂಪದಲ್ಲಿ ಆರಾಧಿಸಿ, ವಿಶ್ವ ಜೀವನವನ್ನು ಆತ್ಮರೂಪದಲ್ಲಿಯೇ ಪರಿಭಾವಿಸಿತು. ಶರಣ ಸಾಹಿತ್ಯವೆಂದರೆ ಆತ್ಮಸಾಹಿತ್ಯವಾಯಿತು! ಸ್ವಾನುಭವ ಮುದ್ರಾ ಮಂಜೂಷವಾಯಿತು! ಜನಜೀವನದಲ್ಲಿ ಹೊಸ ಬಗೆಯ ಆಚಾರ ವಿಚಾರ ರೀತಿ ನೀತಿ, ಧರ್ಮ ಕರ್ಮ ಮಾನವ ಮೌಲ್ಯಗಳು ಬೆಳೆದುಬಂದವು. ಹಳೆಯದರಲ್ಲಿದ್ದ ಸತ್ವವನ್ನು ಹೀರಿಕೊಂಡು 'ವಚನಸಾಹಿತ್ಯ' ಅಮೌಲ್ಯ ಪ್ರಸನ್ನ ಮಾನಸಸರೋವರವಾಯಿತು! ಅಂಥ ಪವಿತ್ರ ಮಾನಸಸರೋವರದಲ್ಲಿ ಮಿಂದು ಶರಣರು ನಿಜೈಕ್ಯರಾದರು! ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಹೆಣ್ಣಾಗಲಿ ಗಂಡಾಗಲಿ—ಆ ನಿತ್ಯಾನಂದ ಮಾನಸಸರೋವರದಲ್ಲಿ ಮಿಂದು ಪುನೀತರಾದರು. ವೇದವಾಣಿ ವಚನಸಾಹಿತ್ಯದಲ್ಲಿ ಶರಣ ಧರ್ಮ ವಾಣಿಯಾಯಿತು; ಶಿವಾಗಮ ಜ್ಯೋತಿ ವಚನ ಸಾಹಿತ್ಯದಲ್ಲಿ ಶಿವಧರ್ಮ ಜ್ಯೋತಿಯಾಯಿತು; ಉಪನಿಷದ್ಭಾನು ಮಂಡಲ ಶರಣ ಜೀವನ ಪ್ರಭಾವಳಿಯಾಯಿತು; ಭಗವದ್ಗೀತಾ ಪಾಂಚಜನ್ಯ ವಚನಸಾಹಿತ್ಯ ಪ್ರಪಂಚದಲ್ಲಿ ಮಂಗಳ ದುಂದುಭಿಯಾಗಿ ಮೊಳಗಿತು; ಪುರಾತನರ ದಿವ್ಯ ಸಂದೇಶ ಆದ್ಯರ ಭವ್ಯ ಚೇತನವಾಯಿತು!

ಚನ್ನಬಸವಣ್ಣನವರು ಶರಣ ಸಾಹಿತ್ಯದ ಸ್ವರೂಪವನ್ನು ಪೂರ್ಣ ಗಂಭೀರವಾಣಿಯಲ್ಲಿ ನಿರೂಪಿಸಿದ್ದಾರೆ. "ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯಬಹುದೆ ಸೋಪಾನ ಬಲ

ದಿಂದಲ್ಲವೆ? ಶಬ್ದ ಸೋಪಾನ ಬಲದಿಂದ ನಿಶ್ಶಬ್ದ ಸೋಪಾನವ ಕಟ್ಟಿ ನಡೆಸಿದವರು ನಮ್ಮ ಪುರಾತನರು; ದೇವಲೋಕಕ್ಕೆ ಬಿಟ್ಟ ಕಾಣಿರೊ! ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು ಗೀತ ಮಾತೆಂಬ ಜ್ಯೋತಿಯ ಬೆಳಗಿಟ್ಟರು, ಕೂಡಲ ಚನ್ನಸಂಗಯ್ಯಾ ನಮ್ಮ ಶರಣರು" ಎಂಬ ವಚನದಲ್ಲಿ ಅವರು ವಚನಸಾಹಿತ್ಯದ ಹಿರಿಮೆ ಗರಿಮೆಗಳನ್ನು ಸೂಚಿಸಿದ್ದಾರೆ. ಶರಣರ ಅನುಭಾವ ಸಾಹಿತ್ಯವೆಂದರೆ ಶುದ್ಧಬ್ರಹ್ಮ ಸಾಹಿತ್ಯವೆಂಬುದರಲ್ಲಿ ಸಂಶಯವಿಲ್ಲ. ಅದು ಪಾವನಗಂಗಾ ಜಲದಂತೆ ಪವಿತ್ರ; ಗೌರೀಶಂಕರ ಶಿಖರದಂತೆ ಮಹೋನ್ನತ! ಮಹಾಸಾಗರದಂತೆ ಗಂಭೀರ! ನೀಲಾಕಾಶದಂತೆ ವಿಶಾಲ! ಸಮೀರನಂತೆ ಸರ್ವವ್ಯಾಪಿ! ಹೋಮಾಗ್ನಿಯಂತೆ ಪೂಜನೀಯ! ವಸುಂಧರೆಯಂತೆ ಸರ್ವಜನಾದರಣೀಯ! ಶರಣಜನ ಹೃದಯಗಂಗಾ ಮೂಲದಲ್ಲಿ ವಚನಸಾಹಿತ್ಯ ದೇವಗಂಗೆ ಉದಯಿಸಿ ಲೋಕಪಾವನೆಯಾದಳು! ಚನ್ನಬಸವಣ್ಣನವರು ವಚನಸಾಹಿತ್ಯ ಸೃಷ್ಟಿಯಲ್ಲಿ ಶರಣವಿರಂಚಿಯಾಗಿದ್ದಾರೆ. ಅವರ ವಚನ ವಿಲಾಸದಲ್ಲಿ ದೇವ ಮಾನವರು ಒಂದಾದರು. ಭಗೀರಥನ ಸಾಹಸ ಪ್ರಭಾವದಿಂದ ದೇವ ಮಂದಾಕಿನಿ ಭೂಮಿಗಿಳಿದು ಬಂದಳಂತೆ! ಚನ್ನಬಸವಣ್ಣನವರ ತಪಃ ಪ್ರಭಾವದಿಂದ ವಚನಸಾಹಿತ್ಯ, ಮಂದಾಕಿನಿ ಭೂಮಿಯಿಂದ ದೇವಲೋಕಕ್ಕೆ ಏರಿದಳು! ಈ ವಚನಸಾಹಿತ್ಯ ಸೌಗಂಧಿಕಾ ಪುಷ್ಪವನ್ನು ಮುಡಿದು ಕನ್ನಡವಾಗ್ದೇವಿ ಸುವಾಸಿನಿಯಾದಳು! ಈ ವಚನಸಾಹಿತ್ಯ ವೈಜಯಂತಿಯನ್ನು ಧರಿಸಿ ಲಕ್ಷ್ಮೀದೇವಿ ಸಿರಿದೇವಿಯೆನಿಸಿದಳು! ಈ ವಚನಸಾಹಿತ್ಯ ಮಾಂಗಲ್ಯವನ್ನು ಧರಿಸಿ ಶ್ರೀಗೌರೀದೇವಿ ಸರ್ವಮಂಗಳೆಯಾದಳು. ಈ ವಚನಸಾಹಿತ್ಯ ಸುಧಾಭಿಷೇಕದಿಂದ ಕೈಲಾಸ ಶಂಕರ

ಧವಳಾಂಗನಾದನು ! ಹಿಮಗಿರಿ ರಜತಗಿರಿಯಾಯಿತು ! ದೇವ ಲೋಕ ನಲಿಯಿತು ! ಮಾನವಲೋಕ ತಣಿಯಿತು! ಈ ವಚನರತ್ನ ಸೋಪಾನ ಭೂಮಿ–ಸ್ವರ್ಗಗಳ ಸಂಪರ್ಕ ಸೇತುವೆಯಾಯಿತು ! ಚನ್ನಬಸವಣ್ಣನವರು ತನಗಿಂತಲೂ ಹಿಂದೆ ಇದ್ದ ವೀರಶೈವ ಧರ್ಮಾಮೃತವನ್ನೂ ಪಾನಮಾಡಿ, ತನ್ನ ಸಮಕಾಲೀನ ಶರಣರ ವಚನಸುಧೆಯನ್ನೂ ಸವಿದು, ಶೈವಪುರಾತನರ ಅನುಭಾವ ಸಾಹಿತ್ಯಪೀಯೂಷವನ್ನು ಆಸ್ವಾದಿಸಿ, ತನ್ನದೇ ಆದ ವೈಶಿಷ್ಟ್ಯ ಪೂರ್ಣ ವಚನಸಾಹಿತ್ಯ ರಸಾಯನವನ್ನು ನೀಡಿ ಲೋಕ ಜಂಗಮ ದಾಸೋಹವನ್ನು ಮಾಡಿ ಸಮಾಜದ ಹೃದಯ ಶೂನ್ಯಸಿಂಹಾಸನ ದಲ್ಲಿ ಮಂಡಿಸಿದರು !

ವಚನಸಾಹಿತ್ಯ ಕವಿಕರ್ಮವಲ್ಲ; ಪಂಡಿತ ಪ್ರಸಾದವಲ್ಲ; ಶಾಸ್ತ್ರ ತೀರ್ಥವಲ್ಲ ! ಅದು ಶಿವಾನುಭವಿಯ ಪರಮಾನಂದ ಸುಧಾ ತರಂಗಿಣಿಯೆಂಬುದೇ ಚನ್ನಬಸವಣ್ಣನವರ ಅಭಿಪ್ರಾಯ : "ವಚನ ರಚನೆಯ ಅನುಭಾವವ ಬಲ್ಲೆವೆಂದೆಂಬರು ; ವಚನ ವಾವುದು, ರಚನೆಯಾವುದು, ಅನುಭಾವವಾವುದು, ಹೇಳಿರಣ್ಣಾ ! ವಚನ, ಆತ್ಮತೃಪ್ತಿಯನರಿಯಬಲ್ಲಡೆ; ರಚನೆ, ಸ್ಥಾವರ ಜಂಗಮ ದಲ್ಲಿ ದಯವಾಗಿರಬಲ್ಲಡೆ ; ಅನುಭಾವ, ಅರಿಷಡ್ವರ್ಗಂಗಳ ಇಚ್ಛೆಗೆ ಹರಿಯದಿರಬಲ್ಲಡೆ; ಇಂತಲ್ಲದೆ, ವೇದಶಾಸ್ತ್ರಾಗಮಂಗಳ ಬಲ್ಲೆನೆಂದು ನುಡಿವಾತನನುಭಾವಿಯೇ ? ಅಲ್ಲ ; ಆತನು ಇದಿರ ನಂಬಿಸಿ ಉಂಬ ಉದರ ಪೋಷಕನಯ್ಯಾ, ಕೂಡಲಚನ್ನಸಂಗಮ ದೇವಾ ! " ಎಂದು ಅವರು ವಚನಸಾಹಿತ್ಯದ ಸತ್ಯದರ್ಶನವನ್ನು ಮಾಡಿಸಿದರು. ಆತ್ಮತೃಪ್ತಿ, ಸರ್ವಪ್ರಾಣಿದಯಾಪರತೆ, ವೈರಾಗ್ಯ ಮನೋಭಾವ–ಈ ಗುಣತ್ರಯ ವಚನಸಾಹಿತ್ಯದಿಂದ ಲಭಿಸುತ್ತದೆ ಎಂಬುದು ಅವರ ಅಚಲ ಅಭಿಪ್ರಾಯ. ಮಣ್ಣಿನ

ಸೂಜಿಯನ್ನು ಮಾಡಿ ಮಾರುವ ಕುಂಬಾರ ಆ ಸೂಜಿಯನ್ನು ಮಾರಲು ಕಬ್ಬಿಣದ ಸೂಜಿಯನ್ನು ಮಾಡಿ ಮಾರುವ ಕುಂಬಾರ ಗೇರಿಗೆ ಹೋದಂತೆ ಪೂರ್ವ ಸಾಹಿತ್ಯವನ್ನು ಹೊಲಬುಗೆಡಿಸಿ ತನ್ನ ಸಾಹಿತ್ಯವೆಂದು ಗರ್ವಿಸುವವರಲ್ಲ ಶರಣರು! ಇದು ಅನುಭಾವ ಸಾಹಿತ್ಯ;

ವಚನಸಾಹಿತ್ಯದಲ್ಲಿ ಆತ್ಮಾನುಭವ ತುಂಬಿದೆ; ಆತ್ಮಾನಂದ ತುಂಬಿದೆ; ಆತ್ಮಜ್ಞಾನ ತುಂಬಿದೆ. ಬರೆದುದೆಲ್ಲಾ ಸಾಹಿತ್ಯವೆಂಬ ಸಾಹಿತ್ಯಬ್ರಹ್ಮರೂ ಉಂಟು! ವಚನಸಾಹಿತ್ಯದ ಸರ್ವಲಕ್ಷಣ ಗಳನ್ನೂ ಚನ್ನಬಸವಣ್ಣನವರು ಹೃದಯಂಗಮವಾಗಿ ನಿರೂಪಿ ಸಿದರು. “ಆನೆಯನೇರಿದ ಮಾವತಿಗ ಚಕ್ರೇಶ್ವರನಾಗಬಲ್ಲನೇ ಅಯ್ಯಾ? ವೇದಾಗಮ ಶಾಸ್ತ್ರ ಪುರಾಣಂಗಳನೋದಿ ಕೇಳಿ ನಡೆನುಡಿ ಪೂರಾಯವಾದ ಪುರಾತನರಾಗಬಲ್ಲರೇ ಅಯ್ಯಾ? ತೊತ್ತು ಲಕ್ಷಣವಿರಲು, ನಾಣ್ಯವನುಡಿಸಿ, ನವರತ್ನಾಭರಣಂಗಳ ತೊಡಿಸಿ ದಂಡಿಗೆಯನೇರಿಸಲು ‘ಶಂಕರಸ್ಯ ಯಥಾಗೌರೀ’ ಎನಿಸಿ ಕೊಳ್ಳಬಲ್ಲಳೇ ಅಯ್ಯಾ? ಖ್ಯಾತಿಗಾಗಿ ನಿಜತತ್ವಂಗಳ ನೋದಿ ಕೇಳಿ ಹೇಳಿದಡೇನು? ಅದಕ್ಕೆ ತಕ್ಕ ಅರಿವು, ಆಚಾರ ನಡೆ-ನುಡಿ ಯಲ್ಲಿ ನಿರ್ಣಯ ಇಲ್ಲದಿರ್ದಡೆ ಕುಂಭೀಪಾಕನಾಯಕ ನರಕ ತಪ್ಪದು, ಕೂಡಲಚನ್ನಸಂಗಮದೇವಾ” ಎಂದು ಅವರು ವಚನ ಸಾಹಿತ್ಯ ಸ್ವರೂಪವನ್ನು ಚಿತ್ರಿಸಿದರು. ನಡೆ-ನುಡಿಯಲ್ಲಿ ಅರಿವು ಆಚಾರ ಸೇರಿರುವುದೇ ವಚನವಾಙ್ಮಯದ ವೈಶಿಷ್ಟ್ಯ. ವಚನ ಸಾಹಿತ್ಯ ಜ್ಞಾನಾನಂದಮಯವಾದುದು! ಅದರಲ್ಲಿ ಅರಿಷಡ್ವರ್ಗ ಗಳ ಉಪಟಳವಿಲ್ಲ; ಸಪ್ತವ್ಯಸನ, ಪಂಚೇಂದ್ರಿಯ ಮತ್ತು ದಶವಾಯು ವಿಷಯಗಳಿಗೆ ಮನಸ್ಸು ವಶವಾಗದಂತೆ ಅದು ಸಾಧಕನನ್ನು ಪ್ರಶಾಂತ ಸ್ಥಿತಿಯಲ್ಲಿ ನಿಲ್ಲಿಸುತ್ತದೆ. “ಅದ್ವರ

ವಚನ ಅಂಗೇಂದ್ರಿಯಂಗಳ ಲಿಂಗೇಂದ್ರಿಯುಗಳೆನಿಸಿತ್ತು ; ನೂರೊಂದು ಸ್ಥಲದಲ್ಲಿ ಏರಿದ ಮಹದಲ್ಲಿ ನೆಲಸಿತ್ತು." "ಇಂತಪ್ಪ ಆದ್ಯರ ವಚನ ಭಂಡಾರವ ನಮ್ಮ ಪ್ರಭು ದೇವರು ಮುಖ್ಯವಾದ ಏಳನೂರೆಪ್ಪತ್ತು ಅಮರಗಣಂಗಳು, ಅಸಂಖ್ಯಾತ ಪುರಾತನರು, ಪ್ರಮಥಗಣಂಗಳು ಕೇಳಿ ಹೇಳಿ ಕೊಂಡಾಡಿದ ಕಾರಣ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಸರ್ವಸುಖವ ಸೂರೆಗೊಂಡು ಸ್ವಯಂಲಿಂಗವಾದರು" ಎಂಬ ಸ್ವಾನುಭಾವವನ್ನು ಅವರು ನುಡಿದರು. ವಚನಸಾಹಿತ್ಯದಿಂದ ಮರ್ತ್ಯಲೋಕದಲ್ಲಿ ದೇವಲೋಕ ಬಂತು ! "ಇದು ಕಾರಣ, ನಮ್ಮ ಕೂಡಲ ಚೆನ್ನ ಸಂಗನ ಶರಣರ ವಚನೋಪದೇಶವ ಕೇಳಿ, ದುರಿತಪಾಪಂಗಳ ಬಿಟ್ಟು, ಮನನಿರತರಾಗಿರಪ್ಪರಯ್ಯಾ– ಲಿಂಗದಲ್ಲಿ." ಎಂದು ಚನ್ನಬಸವಣ್ಣನವರು ವಚನಸಾಹಿತ್ಯವನ್ನು ಭವತಾರಕ ಮಂತ್ರ ಸಾಹಿತ್ಯವೆಂದು ಗೌರವಿಸಿದರು. ಈ ತಾರಕ ಮಂತ್ರಸಾಹಿತ್ಯ ಭವರೋಗನಿವಾರಕ ಸಂಜೀವಿನಿಯಂಥದು ! ಅದರಿಂದ ಸಾಧಕ ಸಿದ್ಧನಾಗುತ್ತಾನೆ.

ಬಿತ್ತದೆ ಬೆಳೆಯದೆ ಬಂದ ಹೆಬ್ಬೆಳಸಿನಂತಿದೆ ಚನ್ನಬಸವಣ್ಣನವರ ಸಾಹಿತ್ಯ ! ಅದರಲ್ಲಿ ಸುಗಂಧ ಬಂಧುರ ಪರಿಮಳವಿದೆ ! ಅದು ಅದಿ ವ್ಯಾಧಿಗಳನ್ನೆಲ್ಲ ಕಳೆದು ನಿರ್ವಾಣ ಪದವಿಯನ್ನು ಕರುಣಿಸುತ್ತದೆ. ಚನ್ನಬಸವಣ್ಣನವರು ಆತ್ಮಾನಂದ ಸ್ಥಿತಿಯನ್ನು ತಮ್ಮ ವಚನವಾಣಿಯ ಮೂಲಕ ಅಭಿವ್ಯಕ್ತಗೊಳಿಸಬಲ್ಲ ಸಮರ್ಥ ಸಾಹಿತಿಯಾಗಿದ್ದಾರೆ. ಅವರ ಕಲ್ಪನಾಕಾಶದಲ್ಲಿ ಸುಳಿಯುದ ಲೋಕಾನುಭವ ಸ್ವರೂಪಗಳಿಲ್ಲ; ಆತ್ಮಾನುಭವದ ಆನಂದ ತರಂಗಗಳಿಲ್ಲ ! ಅವರು ವಚನ ವಾಙ್ಮಯದೇವಿಯ ಪಂಚ ಪ್ರಾಣೇಶ್ವರರಾಗಿರುವಂತೆಯೇ ಶರಣ ಸಾಹಿತ್ಯ ಮಹಾಮನೆಯ

ಮೇಲೆ ಕಂಗೊಳಿಸುವ ಪ್ರಮುಖ ಸುವರ್ಣಕಲಶವೂ ಆಗಿದ್ದಾರೆ. ಅವರು ಷಟ್ಸ್ಥಲವನ್ನು ರೂಪಿಸುವುದರಲ್ಲಿ ಅದ್ವಿತೀಯ ವಚನ ಬ್ರಹ್ಮರಾಗಿರುವಂತೆಯೇ ಸಾಹಿತ್ಯ ಸೌಂದರ್ಯವನ್ನು ರೂಪಿಸುವುದರಲ್ಲಿ ಅಪ್ರತಿಮ ವಚನ ಶಿಲ್ಪಿಯೂ ಆಗಿದ್ದಾರೆ. ಹಿಂದಣ ಸನಾತನ ವೀರಶೈವ ಮತ್ತು ಶೈವ ಮತಗಳಲ್ಲಿದ್ದ ಸತ್ವವನ್ನು ವೇದ ಆಗಮ ಪುರಾಣ ತತ್ತ್ವಾರ್ಥ ನವನೀತದಲ್ಲಿ ಪರಿಪಕ್ವಗೊಳಿಸಿ, ಕನ್ನಡ ಕುಲಕೋಟಿಗೆ 'ಬಹುಧಾಪ್ಯೇಕಂಸಮಾರಾಧನಮ್' ದಾಸೋಹವನ್ನು ನಡೆಸಿದರು.

ಬಸವಣ್ಣನವರ ಅನುಭವಮಂಟಪದಲ್ಲಿ ಆತ್ಮಸಂಸ್ಕಾರವನ್ನು ಪಡೆದ ಶರಣರ ಅನುಭಾವಸ್ಥಿತಿಯನ್ನೆಲ್ಲಾ ಚನ್ನಬಸವಣ್ಣನವರು ಒಪ್ಪಿದಂತಿಲ್ಲ! ಅವರು ಅತಿಸೂಕ್ಷ್ಮ ವಿಮರ್ಶಕರು; ತತ್ವ ವಿಮರ್ಶಕ, ಧರ್ಮವಿಮರ್ಶಕ, ಸಾಹಿತ್ಯವಿಮರ್ಶಕ! ಅವರು ತಮ್ಮ ಸೋದರಮಾವ ಬಸವಣ್ಣನವರನ್ನು ಪರಮ ಗುರುವೆಂದು ಕೈಮುಗಿದು ಆರಾಧಿಸಿದುದೂ ಉಂಟು! ಅವರ ಅನುಭಾವವನ್ನು ಕುರಿತು ವಿಮರ್ಶಿಸಿರುವುದೂ ಉಂಟು. ಅವರು ಶೈವ ಮತ್ತು ವೈಷ್ಣವ, ಜೈನ ಮತ್ತು ಬೌದ್ಧಧರ್ಮ ಸಂಪ್ರದಾಯಗಳನ್ನು ಟೀಕಿಸಿದರೆಂಬುದು ನಿಜವಿರಬಹುದು. ಇದು ಅಂದು ಅವಶ್ಯಕವಾಗಿರಬಹುದು. ಇಂದು ಅದು ಹಿತಕರವಲ್ಲದಿರಬಹುದು. ಅಂದಿಗೆ ಅದು ಬೇಕು; ಇಂದಿಗೆ ಅದು ಸಲ್ಲ! ಸಾಹಿತ್ಯದ ಆನಂದಕ್ಕಿಂತಲೂ ಆಧ್ಯಾತ್ಮಿಕಾನಂದ ನಿತ್ಯವಾದುದು. ಅವರು ಅಂಥ ನಿತ್ಯಾನಂದವನ್ನು ಸಾಹಿತ್ಯದಲ್ಲಿ ಕಂಡು ಕೃತಾರ್ಥರಾದರು!

ಸೃಷ್ಟಿ ಶಕ್ತಿಯನ್ನು ಕುರಿತು ಎಲ್ಲ ಮತಾಚಾರ್ಯರೂ ತಮ್ಮ ತಮ್ಮ ದಿವ್ಯಾನುಭವವನ್ನು ಜಗತ್ತಿಗೆ ಸಾರಿದರು. ಜೀವ ಜಗತ್ತು ಈಶ್ವರ ಈ ತತ್ವತ್ರಯವೇ ವೇದಾಂತದ ಸಾರಸಂಪತ್ತು.

ಚನ್ನಬಸವಣ್ಣನವರು ಈ ತತ್ವತ್ರಯದ ಸುಂದರ ಕಲ್ಪನೆಯನ್ನು ಹೃದಯಂಗಮವಾಗಿ ತಿಳಿಸಿದರು. 'ಲೀಲೆಯಾದಡೆ ಉಮಾಪತಿ; ಲೀಲೆಯುಡಗಿದರೆ ಸ್ವಯಂಭು' ಎಂಬುದು ವೀರಶೈವಸಿದ್ಧಾಂತ. ಈ ಸೃಷ್ಟಿ ಶಿವಶಕ್ತಿಯರ ಲೀಲೆ. ಶಿವನಲ್ಲಿಯೇ ಅಡಗಿ ಬೆರತಿರುವ ಶಕ್ತಿಯ ಆವಿಷ್ಕಾರವೇ ಈ ಜಗತ್ತು. ಶಿವ-ಶಕ್ತಿಯರ ಅವಿನಾಭಾವ ಸಂಬಂಧವೇ ಮೂಲಸ್ವರೂಪ. ಈ ಸ್ವರೂಪ ವನ್ನು ವೀರಶೈವರು ಶೂನ್ಯವೆನ್ನುತ್ತಾರೆ; ನಿಶ್ಶೂನ್ಯವೆನ್ನುತ್ತಾರೆ ; ಬಯಲು ಎನ್ನುತ್ತಾರೆ; ನಿರ್ವಯಲು ಎನ್ನುತ್ತಾರೆ. ಈ ಮೂಲಸ್ವರೂಪವನ್ನು ಅವರು ತಮ್ಮದೊಂದು ವಚನದಲ್ಲಿ ಚಿತ್ರಿ ಸಿದ್ದಾರೆ; ಕಾವ್ಯವಾಣಿಯಲ್ಲಿ ಹಾಡಿದ್ದಾರೆ. "ಕಟಕ ಸೂತ್ರದ ಗೂಡ ಮಾಡಿಕೊಂಡಿಪ್ಪಲ್ಲಿ ಸೂತ್ರಕ್ಕೆ ನೂಲನ್ನು ಅದೆಲ್ಲಿಂದ ತಂದಿತ್ತು? ರಾಟೆ ಇಲ್ಲ; ಹಂಜಿ ಇಲ್ಲ. ತನ್ನಲ್ಲಿಯೇ ನೂಲ ಕಲ್ಪಿಸಿ, ತಾನದನು ಅಂಟಿಸಿಕೊಂಡು ಆಡಿ, ಅಡಗಿಸಿಕೊಂಡು ಹೋಹಂತೆ, ತನ್ನ ಲೀಲೆಗೆ ತಾನೇ ಮಾಡಿಕೊಂಡ ವಿಶ್ವಪ್ರಪಂಚವ ತನ್ನಲ್ಲಿಯೇ ಲಯವನ್ನೈದಿಸಿಕೊಂಡು, ಕೂಡಲಚನ್ನಸಂಗಯ್ಯ ನಿರ್ವಯಲಾದನು"-ಎಂಬ ತತ್ವರಹಸ್ಯವನ್ನು ಸವಿಗನ್ನಡ ನುಡಿ ಯಲ್ಲಿ ಸರಳವಾಗಿ ಹೇಳಿದ್ದಾರೆ. ಈ ವಚನದಲ್ಲಿ ಸಾಹಿತ್ಯ ಸೌರಭ ಹೊರಸೂಸುತ್ತಿದೆ ; ವೇದಾಂತಸಾರ ಧಾರವಾಹಿನಿಯಾಗಿ ಹರಿಯುತ್ತಿದೆ. ಸಮಾಜ ನಿತ್ಯಜೀವನದಲ್ಲಿ ಕಾಣುವ ದೃಷ್ಟಾಂತದ ಮೂಲಕ ಗಹನತತ್ವವನ್ನು ಮುಂದಟ್ಟಾಗುವಂತೆ ತಿಳಿಸಿರುತ್ತಾರೆ. ಜೇಡರಹುಳು ತನ್ನ ಮೈಯಿಂದ ನೂಲನ್ನು ಹೊರತಂದು ತನ್ನ ಬಲೆಯನ್ನು ತಾನೇ ನೇಯುವಂತೆ ಪರಶಿವನು ತನ್ನಲ್ಲಿ ಅಡಗಿರುವ ಮಾಯಾಶಕ್ತಿಯಿಂದ ಪ್ರಪಂಚವನ್ನು ನಿರ್ಮಿಸಿ ತನ್ನ ಲೀಲೆಗೆ ತಾನೇ ಕಾರಣನಾಗಿರುತ್ತಾನೆ ಎಂದು ಅವರು ಹೇಳಿದ ಮಾತಿನಲ್ಲಿ

ಎಂಥ ಮಾಧುರ್ಯವಿದೆಯೆಂಬುದನ್ನು ಅರಿಯಬಹುದು. ವೇದಾಂತವೇ ಸಾಹಿತ್ಯವಾಗಿದೆ; ಸಾಹಿತ್ಯವೇ ವೇದಾಂತವಾಗಿದೆ. ಚನ್ನಬಸವಣ್ಣನವರ ಒಂದೊಂದು ಕಲ್ಪನೆಯೂ ಮಹಾಕಲ್ಪನೆ; ದಿವ್ಯಕಲ್ಪನೆ. ಗಹನತರ ಸಿದ್ಧಾಂತಗಳನ್ನೂ ಅವರು ಮೃದು ಮಧುರ ಪದಪುಂಜಶೈಲಿಯಲ್ಲಿ ಜನಸಾಮಾನ್ಯರಿಗೂ ತಿಳಿಯು ವಂತೆ ರಸೋಪೇತ ಶೈಲಿಯಲ್ಲಿ ಹೇಳುತ್ತಾರೆ.

ಪ್ರತಿಯೊಬ್ಬ ಜೀವರೂ ಪರಮಾತ್ಮನ ಅಂಶಸಂಭೂತರು! ಈ ಜೀವರೆಲ್ಲಾ ಪರಮಾತ್ಮನಲ್ಲಿಯೇ ಸೇರಿಹೋಗುತ್ತಾರೆ. ಜೀವರೆಲ್ಲ ಪರಮಾತ್ಮನ ಸ್ವರೂಪವೇ ಆಗಿದ್ದರೂ ಅಜ್ಞಾನವೆಂಬ ತೆರೆ ಜೀವಾತ್ಮ-ಪರಮಾತ್ಮರ ನಡುವೆ ನಿಂತು ಅವರಿಬ್ಬರನ್ನೂ ಬೇರ್ಪಡಿಸಿದೆ. ಇದರಿಂದ ಜೀವಾತ್ಮ ತನ್ನ ಮೂಲ ಸ್ವರೂಪ ವನ್ನು ಅರಿಯಲಾರದೆ ತೊಳಲುತ್ತಾನೆ. ತಿಳಿ ನೀರಿನ ಮೇಲೆ ಶೈಲೂಷವಿರುವಂತೆ, ಅಖಂಡ ಮೂಲಪ್ರಭೆಯುನ್ನು ಸಂಸಾರವೆಂಬ ಮಾಯಾಪಟಲ ಮರೆಮಾಡಿದೆ! ಇದನ್ನೇ ಚನ್ನಬಸವಣ್ಣನವರು "ಜ್ಞಾನಾಮೃತವೆಂಬ ಜಲನಿಧಿಯ ಮೇಲೆ, ಸಂಸಾರವೆಂಬ ಹಾವಸೆ ಮುಸುಕಿಹುದು; ನೀರವೊಗೆವರು ಬಂದು ನೂಕಿದಲ್ಲದೆ, ತೆರಳದು. ಮರಳಿ ಮುಸುಕುವುದ ಮಾಣಿಸಯ್ಯಾ; ಆಗಳು ಎನ್ನುವಸೆನೆವೃತ್ತಿರಬೇಕೆಂದು ಬೇಗ ಗುರು ಅಪ್ಪೈಸಿ, ತನ್ನ ಪ್ರಸಾದವೆಂದು ಕುರುಹಕೊಟ್ಟನು ದಿವಾರಾತ್ರಿ ತನ್ನನರಿಯ ಬೇಕೆಂದು. ಕೆರೆಯ ನೀರನುಂಡು ತೊರೆಯನೀರ ಹೊಗಳುವ, ಅರೆಮರುಳರ ಮೆಚ್ಚುವನೆ ನಮ್ಮ ಕೂಡಲಚನ್ನಸಂಗಮದೇವ?" ಎಂಬ ವಚನವೇದಾಂತವೂ ಹೌದು; ಸಾಹಿತ್ಯವೂ ಹೌದು. 'ಜ್ಞಾನಾಮೃತವೆಂಬ ಜಲನಿಧಿ'–ಎಂಬ ಪದಪುಂಜ ಎಂಥ ಕಲ್ಪನಾ ವಿಲಾಸವೋ 'ಸಂಸಾರವೆಂಬ ಹಾವಸೆ' ಎಂಬ ಪದಶ್ರೇಣಿ ಅಷ್ಟೇ

ಸುಂದರ ಕಲ್ಪನಾವಿಲಾಸವಾಗಿದೆ. ಆ ಹಾವಸೆ ಹರಿಯದ ಹೊರತು ತಿಳಿನೀರು ದೊರೆಯುವಂತಿಲ್ಲ. ದಾರಿಹೋಕರೆಲ್ಲಾ ಆ ಹಾವಸೆಯನು ಕಳೆಯುವುದಿಲ್ಲ. ನೀರನ್ನು ಕುಡಿಯುವವರು ಮಾತ್ರವೇ ಆ ಹಾವಸೆಯನ್ನು ದೂರಸರಿಸಿ ತಿಳಿನೀರನ್ನು ಕುಡಿಯುತ್ತಾರೆ. ಆ ಹಾವಸೆ ಮತ್ತೆ ತಿಳಿನೀರಿನ ಮೇಲೆ ಬರದಂತೆ ಸಂಸ್ಕಾರವಾಗಲೇಬೇಕು. ಅಂಥ ಸಂಸ್ಕಾರದ ಕುರುಹೇ ಗುರು ಪ್ರಸಾದರೂಪ ಇಷ್ಟಲಿಂಗ! ತಿಳಿವಿನ ಬೆಳಕನ್ನು ನೀಡುವ ಇಷ್ಟ ಲಿಂಗವನ್ನು ಬಿಟ್ಟು ಸ್ಥಾವರ ಲಿಂಗಪೂಜೆಯನ್ನು ಮಾಡುವುದು ಸರಿಯಲ್ಲ. ಕೆರೆಯ ನೀರನ್ನು ಕುಡಿದು ತೊರೆಯ ನೀರನ್ನು ಹೊಗಳುವುದು ಸರಿಯಲ್ಲ. ಅಂಥ ಅರೆಮರುಳರನ್ನು ದೇವರು ಮೆಚ್ಚುವುದಿಲ್ಲ–ಎಂಬ ಮಾತಿನಲ್ಲಿ ಎಂಥ ಲೋಕಾನುಭವವಿದೆ!

ಅವರ ನುಡಿಯಲ್ಲಿ ಪ್ರತಿಭಾ ಸರ್ವಮಂಗಳೆ ಲಾಸ್ಯವಾಡುತ್ತಾಳೆ! ಅವಳ ಪದನ್ಯಾಸ, ಭಾವಕೃಪಾಕಟಾಕ್ಷ, ಉಪಮಾ ಸೌಂದರ್ಯ, ದರ್ಶನಮಂದಹಾಸ, ತತ್ವಪ್ರಸಾದವಾಣಿ–ಇವು ಅವರ ಸಾಹಿತ್ಯದಲ್ಲಿ ಧ್ವನಿಪೂರ್ಣ ಚಂದ್ರಿಕೆಯಲ್ಲಿ ವಿಹರಿಸುತ್ತಿವೆ. ಆ ಚಂದ್ರಿಕೆಯಲ್ಲಿ ಅನುಭಾವ ಮಂದಾನಿಲ ಎಲ್ಲ ದಿಕ್ಕುಗಳಿಗೂ ಪರಿಮಳವನ್ನು ಬೀರುತ್ತದೆ. ಬಹುತರ ಕೋಟಿಜನ್ಮಗಳಲ್ಲಿ ಆರ್ಜಿಸಿದ ಪುಣ್ಯಫಲದಿಂದ ಮಾನವಜನ್ಮ ಲಭಿಸುತ್ತದೆ. ಮಾನವರು ಜಪದಿಂದ, ತಪದಿಂದ ಧ್ಯಾನದಿಂದ, ಪೂಜೆಯಿಂದ, ಪ್ರಾರ್ಥನೆಯಿಂದ; ಸಮಾಧಿಯಿಂದ, ಪರಮಾತ್ಮನನ್ನು ಅರಿತವರಂತೆ ತೊಳಲುತ್ತಾರೆ. ಪಾಪಕ್ಷಯವಾಗದ ಹೊರತು ಪರಮಾತ್ಮನ ಸಾಕ್ಷಾತ್ಕಾರವಾಗಲಾರದೆಂದು ಚನ್ನಬಸವಣ್ಣನವರು ನಂಬಿದರು. ಅವರ ನಂಬುಗೆಯನ್ನು ಲೋಕಕಲ್ಯಾಣ ದೃಷ್ಟಿಯಿಂದ ಸಾರಿ ಹೇಳಿದರು. ಅವರ ವಾಗ್ವೈಭವವನ್ನು ಅರಿತು

ಆನಂದಿಸಬೇಕು! ಅವರು ಸುಂದರ ಸಾದೃಶ್ಯಗಳಿಂದ ಅಯಾ ಸನ್ನಿವೇಶದ ಪೂರ್ಣ ಮನೋಹರಚಿತ್ರವನ್ನು ರೂಪಿಸುತ್ತಾರೆ. ಅವರು 'ವಚನಬ್ರಹ್ಮರಾಗಿರುವಂತೆಯೇ' 'ವಚನಶಿಲ್ಪಿ'ಯೂ ಆಗಿರುತ್ತಾರೆ. ಅವರ ಸಾಹಿತ್ಯದಲ್ಲಿ ಇಹಲೋಕ ಜೀವನ ಸೌಂದರ್ಯ ತುಂಬಿದೆ; ಪರಲೋಕ ಜೀವನಸೌಭಾಗ್ಯ ಮೆರೆದಿದೆ! ಅವರ ವಚನ ಮಾಣಿಕ್ಯಮಾಲೆ ಕನ್ನಡದೇವಿಯ ಶ್ರೀಕಂಠದಲ್ಲಿ ಎಂದೆಂದೂ ಶೋಭಿಸುತ್ತಿರಲಿ! ಅವರ ಸೂಕ್ತ ಸುಧಾರ್ಣವದಲ್ಲಿ ನಿತ್ಯಸತ್ಯ ಸ್ವಾನುಭವ ತುಂಬಿದೆಯೆಂಬುದನ್ನು ಸಹೃದಯರು ಪರಿಭಾವಿಸಿ ಆನಂದಿಸಬಲ್ಲರು! "ಮೇಘ ನಿರ್ಮಲಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಯದೋ?" "ಊರಮುಂದೆ ಸೊಣಗನ ಕಾಣಬಹುದಲ್ಲದೆ ಸಿಂಹನ ಕಾಣಬಾರದು" 'ಧರೆಯಮೇಲೆ ವೇಷಧಾರಿಗಳ ಕಾಣಬಹುದಲ್ಲದೆ ಶಿವಜ್ಞಾನಿಗಳ ಕಾಣಬಾರದು.' 'ಅಂಧಕನ ಕೈಯ ಅಂಧಕ ಹಿಡಿದಂತೆ!' 'ಕಣ್ಣಾರಿಯದಿರ್ದಡೆಯೂ ಕರುಳರಿಯಬೇಡವೇ!' 'ಉದಯಾಸ್ತಮಾನವೆಂಬ ಕೊಳಗದಲ್ಲಿ ಆಯುಷ್ಯವೆಂಬ ರಾಶಿಯನಳೆವರು. 'ಕಬ್ಬನಗಿದ ಗಾಣಬಲ್ಲುದೆ ಹಾಲಸವಿಯ' 'ಕತ್ತಲೆಯ ಮನೆಯಲ್ಲಿದ್ದ ಮನುಜನು ಜ್ಯೋತಿಯನೆನಿಸು ಹೊತ್ತು ನೆನೆವಡೆಯು ಬೆಳಕಾಗಬಲ್ಲದೆ, ಬೆಂಕಿಯ ಹೊತ್ತಿಸದನ್ನಕ್ಕ? 'ಕುರಿ ಬಲ್ಲುದೆ ರಸದಾಳಿನಕಟ್ಟಿನ ಸ್ವಾದುವ.' 'ಗಗನದಲಾಡುವ ಪಕ್ಷಿಬಲ್ಲುದೆ ರವಿಯನಿಲವ?' 'ಗೋವಿನಹೊಟ್ಟೆಯಲ್ಲಿ ಘೃತವಿದ್ದಡೇನೂ ಆ ಗೋವು ದಿನದಿನಕ್ಕೆ ಪುಷ್ಟವಾಗಬಲ್ಲುದೆ?' 'ಜ್ಞಾನಿಗೆ ಕತ್ತಲೆಯಿಲ್ಲ; ಅಜಾತಂಗೆ ಹೊಲೆಯಿಲ್ಲ' 'ಚಾಂಡಾಲ ಭಾಂಡದಲ್ಲಿ ಭಾಗೀರಥಿಯುದಕವ ತುಂಬಿದಡೇನೂ ಶುದ್ಧವಾಗಬಲ್ಲುದೆ?' 'ತಾಯಮಾರಿ ತೊತ್ತ

ಕೊಂಬರನೇನೆಂಬೆನಯ್ಯಾ' 'ಸತಿಪತಿಯ ಒಲುಮೆಯ ಮುನಿಸು ಅತಿಬೇಟವೆಂಬುದಃ ತಪ್ಪದು.' 'ಶರಣರು ಸಾಣೆಯಲ್ಲಿ ಸವೆವ ಶ್ರೀಗಂಧದಂತಿರಬೇಕು.' 'ವೃಕ್ಷದ ಕೊನೆಗಳಿಗೆ ಉದಕವ ನೀಡಿದಡೆ ಫಲವಹುದೆ; ಬೇರಿಂಗೆ ನೀಡಬೇಕಲ್ಲದೇ?' 'ಮುತ್ತು ನೀರಿನಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ?' 'ಬಾವನ್ನದ ವೃಕ್ಷ ಊರೊಳಗಿರ್ದಡೇನು, ಅಡವಿಯೊಳಗಿರ್ದಡೇನು? ಪರಿಮಳ ಒಂದೇ.' 'ಬುತ್ತಿಯಃಕಟ್ಟಿ ಹೊಟ್ಟೆಯಮೇಲಿಕ್ಕಿ ಕೊಂಡಿರ್ದಡೆ ಹಸಿವುಹೋಗಿ ಅಪ್ಯಾಯನವಳವಡುವುದೆ?' 'ಬೇವಿನಹಣ್ಣು ಕಾಗೆಗಲ್ಲದೆ ಕೋಗಿಲೆಗಲ್ಲ.' 'ಸೂತ್ರದ ಬೊಂಬೆಗೆ ಪ್ರಾಣವುಂಟೆ?' 'ಹಾಲಹಿಡಿದು ಬೆಣ್ಣೆಯ ನರಸಲುಂಟೆ'–ಇಂಥ ಚೆಲುವುನುಡಿ ಗಡಣ ಚನ್ನಬಸವಣ್ಣನವರ ವಚನಸಾಹಿತ್ಯದಲ್ಲಿ ತುಂಬಿತುಳು ಕುತ್ತಿದೆ. ಒಂದೊಂದು ನುಡಿ ಗಡಣವನ್ನೂ ವಿಸ್ತರಿಸಿ ವ್ಯಾಖ್ಯಾನಮಾಡಿದರೆ–'ಚನ್ನಬಸವ ಸಾಹಿತ್ಯದ ಮಾಧುರ್ಯ ಹೊರಹೊಮ್ಮುತ್ತದೆ!'

ಕನ್ನಡ ನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಸಮಾಜದಲ್ಲಿ ಧಾರ್ಮಿಕ, ಆಧ್ಯಾತ್ಮಿಕ ಮತ್ತು ಸಾಹಿತ್ಯ ಮನೋ ಧರ್ಮವನ್ನು ಬೆಳಸಿದರು. ಆ ಶರಣರಲ್ಲಿ ಮಹಾಶರಣ ಚನ್ನ ಬಸವಣ್ಣ. ಅವರು ಷಟ್ಸ್ಥಲಜ್ಞಾನಿಯೆಂಬುದು ನಿಜ; ಸಮ್ಯಕ ಜ್ಞಾನಿ ಎಂಬುದೂ ನಿಜ. ಆದರೆ ಅವರು ನಿಜಶರಣ ಚನ್ನಬಸವಣ್ಣ ಎಂಬುದು ನಿಜದಲ್ಲಿ ನಿಜ. ಅವರು ಶಿವಜ್ಞಾನದ ಸಾಕಾರ ದಂತಿದ್ದರು. ಜಗತ್ತಿನಲ್ಲಿ ಅನೇಕ ತತ್ವಜ್ಞಾನಿಗಳುಂಟು; ಸಮಾಜ ಸುಧಾರಕರುಂಟು; ಉತ್ತಮೋತ್ತಮ ಸಾಹಿತ್ಯ ನಿರ್ಮಾಪಕರುಂಟು; ಧಾರ್ಮಿಕಕ್ರಾಂತಿಕಾರರುಂಟು; ಶ್ರೇಷ್ಠ ಶಿವಭಕ್ತರುಂಟು. ಚನ್ನಬಸವಣ್ಣನವರು ಅಂಥ ಮಹಾಪುರುಷ

ರಲ್ಲಿ ಗೌರವಸ್ಥಾನದಲ್ಲಿದ್ದಾರೆ. ಚನ್ನಬಸವಣ್ಣನವರು ಸುಮಾರು ಅವರ ಇಪ್ಪತ್ತುನಾಲ್ಕನೆಯ ವಯಸ್ಸಿನಲ್ಲಿಯೇ ಲಿಂಗೈಕ್ಯರಾದರು ! ಅವರು ಸಮಾಜಪುರುಷರು ; ಸಮಾಜೋದ್ಧಾರಕರು. ಅವರು ಎಲ್ಲರನ್ನೂ ಗೌರವಿಸಿದರು ; ಎಲ್ಲರನ್ನೂ ಶಿವಮಾರ್ಗದಲ್ಲಿ ನಡಸಿದರು ! ಅವರ ವಿಶಾಲಮನೋಭಾವನೆಯಲ್ಲಿ ಜಗತ್ತನ್ನೇ ಶಿವನೆಂದು ಆರಾಧಿಸಿದರು ; ದೀನದಲಿತರನ್ನೂ ಆಲಿಂಗಿಸಿ ಸಂತೈಸಿದರು. ಅವರಿಂದ ಕನ್ನಡನಾಡು ಪುಣ್ಯಭೂಮಿಯೆನಿಸಿತು ; ಕನ್ನಡನುಡಿ ಪವಿತ್ರವೆನಿಸಿತು ; ಕನ್ನಡ ಜನಕೋಟಿ ಶ್ರೇಷ್ಠವೆನಿಸಿತು ! ಅವರ ವಚನಸಾಹಿತ್ಯ ಪ್ರಭಾವ ಅಂದಿನಿಂದ ಇಂದಿಗೂ ಕನ್ನಡ ಸಾಹಿತ್ಯದಲ್ಲಿ ನಿಚ್ಚಳವಾಗಿ ಕಾಣುತ್ತಿದೆ. ಚನ್ನಬಸವಣ್ಣನವರು ಕನ್ನಡ ಸಾಹಿತ್ಯದಲ್ಲಿ ಪರಂಜ್ಯೋತಿಯಂತೆ ಬೆಳಗುತ್ತಿದ್ದಾರೆ; ವಿಶ್ವಧರ್ಮದಲ್ಲಿ 'ಚಿರಂಜೀವಿಯಾಗಿ ರಾರಾಜಿಸುತ್ತಿದ್ದಾರೆ.

ಕೆ.ಸಂ. ೨೫೧೩೪—ಎಂ.ಯು.ಪಿ.ಎಂ.—೧೦,೦೦೦ ಪ್ರತಿಗಳು—೧—೪—೮೭

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ